# ಇಳಕಲ್ಲ ಸೀರೆ : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕರು

**ಲಲಿತಾ ಬಾವಿಕಟ್ಟಿ**
ಉಪನ್ಯಾಸಕರು
ಹೆಚ್.ಆರ್. ಶ್ರೀರಾಮುಲು ಮಹಾವಿದ್ಯಾಲಯ
ಗಂಗಾವತಿ

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**
ಮುಖ್ಯಸ್ಥರು
ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕೂಡಲಸಂಗಮ






ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಇಳಕಲ್ಲ ಸೀರೆ : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರು ಪ್ರಬಂಧ)


ಸಂಶೋಧಕರು

**ಲಲಿತಾ ಬಾವಿಕಟ್ಟಿ**

ಉಪನ್ಯಾಸಕರು

ಹೆಚ್.ಆರ್. ಶ್ರೀರಾಮುಲು ಮಹಾವಿದ್ಯಾಲಯ

ಗಂಗಾವತಿ

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಮುಖ್ಯಸ್ಥರು

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೂಡಲಸಂಗಮ









ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೭

# ಪ್ರಮಾಣ ಪತ್ರ

**"ಇಳಕಲ್ಲಸೀರೆ: ಸಾಂಸ್ಕೃತಿಕ ಅಧ್ಯಯನ"** ಎಂಬ ಕಿರುಪ್ರಬಂಧವನ್ನು ಡಾ.ಕೆ. ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಶ್ತ್ರ ವಿಭಾಗಕ್ಕೆ ಸಾದರಪಡಿಸಿದ್ದೇನೆ. ಪ್ರಸ್ತುತ ಕಿರುಪ್ರಬಂಧದ ಯಾವುದೆ ಭಾಗವು ಈ ಮೊದಲು ಯಾವುದೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಲಲಿತಾ ಬಾವಿಕಟ್ಟಿ.)

ಸ್ಥಳ : ವಿದ್ಯಾರಣ್ಯ
ದಿನಾಂಕ: ೪|೬|೨೦೦೨

# ದೃಢೀಕರಣ ಪತ್ರ

**"ಇಳಕಲ್ಲಸೀರೆ : ಸಾಂಸ್ಕೃತಿಕ ಅಧ್ಯಯನ"** ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಲಲಿತಾ ಬಾವಿಕಟ್ಟಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಕಿರುಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: 4/8/07

(ಡಾ.ಕೆ. ರವೀಂದ್ರನಾಥ)
ಮುಖ್ಯಸ್ಥರು
ಅಂತರಾಷ್ಟ್ರೀಯ [illegible] ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ ಹಂಪಿ
ಕೂಡಲಸಂಗಮ- [illegible]

# ಅರಿಕೆ

ನಾಡಿನ ಪರಿಪೂರ್ಣವಾದ ಸಂಸ್ಕೃತಿಕ ಅಧ್ಯಯನ ಎನ್ನುವುದು ಉಪೇಕ್ಷೆಗೆ ಒಳಗಾದಂತಹ ಎಲ್ಲಾ ಸಂಗತಿಗಳನ್ನು ದಾಖಲಿಸುವುದರಿಂದ ಸಾದ್ಯವಾಗುತ್ತದೆ. ಹೀಗಾಗಿ ನಮ್ಮ ಜನರ ಕಲಾತ್ಮಕ ಬದುಕು ಉಪಜೀವನ ಹಾಗೂ ಜೀವನಗಳ ಹಿನ್ನೆಲೆಯಲ್ಲಿ ಬೆಳೆದು ಬಂದಿರುತ್ತದೆ. ಈ ದೃಷ್ಠಿಯಿಂದ ವ್ಯಕ್ತಿ ಕೇಂದ್ರಿತವಾಗಿ ಬದುಕುವ ಉಪಜೀವನ ಪದ್ಧತಿಯನ್ನು,ಸಮಷ್ಠಿಕೇಂದ್ರಿತವಾಗಿ ಬದುಕುವ ಜೀವನ ಪದ್ಧತಿಯನ್ನು ದಾಖಲಿಸಬೇಕಾಗಿದೆ. ಇಂತಹ ದಾಖಲೀಕರಣದಿಂದ ಸಾಂಸ್ಕೃತಿಕ ಅಧ್ಯಯನಗಳಿಗೆ ನ್ಯಾಯ ದೊರಕಿಸಿ ಕೊಟ್ಟಂತಾಗುತ್ತದೆ. ಈ ದೃಷ್ಟಿಯಿಂದ ನೇಕಾರರ ಉಪಜೀವನವಾಗಿ ಹುಟ್ಟಿ ನಾಡವರ ಸಾಂಸ್ಕೃತಿಕ ಕಲೆಯಾಗಿ ಬೆಳೆದ 'ಇಳಕಲ್ಲ ಸೀರೆ' ಕುರಿತು ಈ ಕಿರು ಪ್ರಬಂಧ ಸಿದ್ದಗೊಂಡಿದೆ.

ಈ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಅಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಹಾಗೂ ಈಗಿನ ಕುಲಪತಿಗಳಾದ ಡಾ.ಕೆ.ವಿ. ನಾರಾಯಣ ಅವರಿಗೂ ಕುಲಸಚಿವರಾದ ಶ್ರೀವಿ.ಶಂಕರ್ ಅವರಿಗೂ, ಅದೇ ರೀತಿ ಅಧ್ಯಯನಾಂಗದ ನಿರ್ದೇಶಕರಾದ ಡಾ.ಪಾಂಡುರಂಗಬಾಬುರವರಿಗೂ ಮತ್ತು ಪ್ರೊ.ಮಲ್ಲೇಪುರಂ. ಜಿ. ವೆಂಕಟೇಶ್ ಮತ್ತು ಡಾ.ಟಿ.ಆರ್. ಚಂದ್ರಶೇಖರ್ ಅವರಿಗೂ ನನ್ನ ಕೃತಜ್ಞತೆಗಳು.

'ಇಳಕಲ್ಲ ಸೀರೆ': ಸಾಂಸ್ಕೃತಿಕ ಅಧ್ಯಯನ ಈ ವಿಷಯವನ್ನು ಸೂಚಿಸಿ ಸೂಕ್ತವಾದ ಸಲಹೆ ಸೂಚನೆಗಳ ಮೂಲಕ ಮಾರ್ಗದರ್ಶನ ಮಾಡಿದ ಹಸ್ತಪ್ರತಿಶಾಶ್ತ್ರ ವಿಭಾಗದ ಪ್ರವಾಚಕರು ಹಾಗೂ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ ಕೂಡಲಸಂಗಮದ ಮುಖ್ಯಸ್ಥರು ಆಗಿರುವ ಗುರುಗಳಾದ ಡಾ. ಕೆ. ರವಿಂದ್ರನಾಥ ಅವರಿಗೆ ಋಣಿಯಾಗಿದ್ದೇನೆ.

ಅಧ್ಯಯನದ ಸಮಯದಲ್ಲಿ ಮಾಹಿತಿ ನೀಡಿ ಪ್ರೋತ್ಸಾಹಿಸಿದ ಹಸ್ತಪ್ರತಿಶಾಶ್ತ್ರ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಎಸ್. ಅಂಗಡಿ ಪ್ರಾಧ್ಯಾಪಕರಾದ ಡಾ.ವೀರೇಶ್ ಬಡಿಗೇರ. ಡಾ.ಎಫ್.ಟಿ. ಹಳ್ಳಿಕೇರಿ ಮತ್ತು ಡಾ.ಎಸ್.ಆರ್ ಚನ್ನವೀರಪ್ಪ ಹಾಗೂ ಶಾಶನಶಾಶ್ತ್ರ ವಿಭಾಗದ ಡಾ. ಎಂ.ಕೊಟ್ರೇಶ್ ಅವರಿಗೂ ಕೃತಜ್ಞತೆಗಳು. ಹಾಗೇಯೇ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಪ್ರಾಧ್ಯಪಕರಾದ ಡಾ. ಸುಬ್ಬಣ್ಣ ರೈ ಡಾ.ಮಾಧವ ಫೆರಾಜೆ ಶ್ರೀಸಿ.ವೆಂಕಟೇಶ್ ಅವರಿಗೂ ವಂದನೆಗಳು. ಅಧ್ಯಯನದ ಪೂರಕ ಮಾಹಿತಿಗಾಗಿ ಗ್ರಂಥಾಲಯವನ್ನು

ಆಶ್ರಯಿಸಿದಾಗ ಸಹಕರಿಸಿದ ಗ್ರಂಥಪಾಲಕರಿಗೂ ಹಾಗೂ ಅಲ್ಲಿಯ ಸಿಬ್ಬಂದಿಯವರಿಗೂ ವಂದನೆಗಳು. ಗಂಗಾವತಿಯ ಶ್ರೀಎಚ್.ಆರ್ ಶ್ರೀರಾಮುಲು ಮಹಾವಿದ್ಯಾಲಯ, ನಾನು ಅಧ್ಯಾಪಕ ವೃತ್ತಿ ಮಾಡುವ ಸಂಸ್ಥೆ, ಆ ಸಂಸ್ಥೆಯ ಅಧ್ಯಕ್ಷರಾದ ಶ್ರೀಎಚ್.ಜಿ. ರಾಮುಲು ಅವರಿಗೂ ಕಾರ್ಯದರ್ಶಿಗಳಾದ ಡಾ. ಎ.ಸೋಮರಾಜು ಅವರಿಗೂ ಮತ್ತು ಸಮಸ್ಥ ಆಡಳಿತ ಮಂಡಳಿಯ ಸರ್ವ ಸದಸ್ಯರಿಗೂ ನನ್ನ ಕೃತಜ್ಞತೆಗಳು.

ಕಾಲೇಜಿನ ಪ್ರಾಚಾರ್ಯರಾದ ಪ್ರೊ. ಆರ್.ಡಿ. ಧರ್ಮಟ್ಟಿ, ನಿವೃತ್ತ ಪ್ರಾಧ್ಯಾಪಕ ಗುರುಗಳಾದ ಶ್ರೀವಿ. ಎಚ್. ನಾಯಕ್ ಮತ್ತು ಶ್ರೀಬಿ.ಎನ್. ನಾಯಕ್ ಅವರಿಗೂ ಸಹದ್ಯೋಗಿ ಶಿಕ್ಷಕ ಹಾಗೂ ಶಿಕ್ಷಕೇತರ ಸಿಬ್ಬಂದಿಯವರಿಗೂ ಕೃತಜ್ಞಳಾಗಿದ್ದೇನೆ.

ನನ್ನ ಅಧ್ಯಯನಕ್ಕೆ ಸದಾ ಶ್ರಮಿಸಿದ ಪೂಜ್ಯ ತಂದೆತಾಯಿಗಳಾದ ಶ್ರೀಸಿದ್ರಾಮಪ್ಪ ಬಾವಿಕಟ್ಟಿ ಮತ್ತು ಶ್ರೀಮತಿ ನಿರ್ಮಲಮ್ಮ ಬಾವಿಕಟ್ಟಿ ಅವರಿಗೆ ನಮಸ್ಕಾರಗಳು. ಶ್ರೀಎಸ್.ಎಸ್. ಬಾವಿಕಟ್ಟಿ, ಈ.ಎಸ್. ಬಾವಿಕಟ್ಟಿ ಪುಸ್ತಕ ವ್ಯಾಪಾರಿಗಳು ಗುಲ್ಬರ್ಗಾ, ಶ್ರೀಮತಿ ಡಾ. ಜಯಶ್ರೀ ಡಾ.ಶಿವಾನಂದ ಬಾವಿಕಟ್ಟಿ ಗಂಗಾವತಿ ಅವರಿಗೂ ನನ್ನ ಪ್ರಣಾಮಗಳು. ಬಾವಿಕಟ್ಟಿ ಸಹೋದರಿಯರು, ಸಹೋದರರು, ಅತ್ತಿಗೆಯರೆಲ್ಲರಿಗೂ ಪ್ರೀತಿಯ ನೆನೆಕಗಳು. ಈ ಅಧ್ಯಯನಕ್ಕೆ ಪೂರಕ ಸಾಮಗ್ರಗಳನ್ನು ಒದಗಿಸಿಕೊಟ್ಟ ಡಾ.ಎಸ್.ಪಿ.ಕಂದಗಲ್.ಪ್ರಾಧ್ಯಾಪಕರು ರಸಾಯನಶಾಸ್ತ್ರ ವಿಭಾಗದ ಇವರಿಗೂ ಹಾಗೂ ಕ್ಷೇತ್ರಕಾರ್ಯದಲ್ಲೂ ಸಹಕರಿಸಿದ ಶ್ರೀಸತೀಶ್ ಸಪ್ಪರದ, ಶ್ರೀಬಸವರಾಜ ನಾಲವಾಡ, ಶ್ರೀಎಸ್.ಪಿ. ಸರೋದೆ. ರಾಜೊಳ್ಳಿ ಸಹೊದರರು ಇಳಕಲ್ಲ ಗುರು ಬನ್ನಿಗೋಳ್ ಸಾವಿತ್ರಿ ಪವಾರ್ ಹಾಗೂ ಶ್ರೀಪನ್ನಾಲಾಲ್ ಶೆಠ್ ಗಜೇಂದ್ರಗಡ ಬಾಗಮಾರ್ ಗಂಗಾವತಿ, ವಿಶ್ವವಿದ್ಯಾಲಯದ ಎಲ್ಲಾ ನನ್ನ ಸ್ನೇಹಿತರ ಬಳಗಕ್ಕೂ ಕೃತಜ್ಞತೆಗಳು ಕಿರುಪ್ರಬಂಧದ ಸಿದ್ದತೆಯಲ್ಲಿ ಸಹಕರಿಸಿದ ಶ್ರೀಕುಮಾರ.ಜೆ. ಮತ್ತು ಕಲ್ಲಯ್ಯ ಹಿರೇಮಠ ಅವರಿಗೂ ಕೃತಜ್ಞತೆಗಳು. ಕಿರುಪ್ರಬಂಧವನ್ನು ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಎಚ್.ಎಂ.ವಿರೂಪಾಕ್ಷಯ್ಯ ಬನ್ನಿಮಟ್ಟಿ ಅವರಿಗೂ ವಂದನೆಗಳು.

**ಲಲಿತಾ ಬಾವಿಕಟ್ಟಿ**

# ಪರಿವಿಡಿ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಕರ್ನಾಟಕ ಹಲವು ವಿಶೇಷತೆಗಳಿಂದ ಕೂಡಿದ ಸಾಂಸ್ಕೃತಿಕ ನಾಡು.ಈ ವಿಶೇಷತೆಗಳಲ್ಲಿ ವ್ಯಕ್ತಿ, ವಸ್ತು ಮತ್ತು ಸ್ಥಳ ವಿಶೇಷಗಳೆಂದು, ಗುರಯತಿಸಬಹುದು. ಯಾವುದೇ ಪ್ರದೇಶ ಮಹತ್ವ ಪಡೆದುಕೊಳ್ಳುವುದು ಅಲ್ಲಿ ಆದರ್ಶವಾಗಿ ಬದುಕಿದ ವ್ಯಕ್ತಿಗಳಿಂದ ಮತ್ತು ಪರಂಪರೆಯಾಗಿ ಹೆಸರು ಮಾಡಿದ ಅಲ್ಲಿಯ ವಸ್ತುಗಳಿಂದ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಮಂಗಳೂರು ಹಂಚು, ಚನ್ನಪಟ್ಟಣ, ಹಾಗೂ ಕಿನ್ನಾಳ ಗೊಂಬೆಗಳು, ಕಲಘಟಗಿ ತೊಟ್ಟಿಲು, ಧಾರವಾಡ ಪೇಡೆ, ನಂಜನಗೂಡಿನ ಹಲ್ಲುಪುಡಿ, ಬ್ಯಾಡಗಿ ಮೆಣಸಿನಕಾಯಿ, ಸವಣೂರಿನ ಖಾರ, ಬೀದರಿನ ಬಿದ್ರಿಕಲೆ, ಗೋಕಾಕ, ಕರದಂಟು, ಮುಧೋಳನಾಯಿ, ಹೀಗೆ ಅಲ್ಲಿಯ ವಸ್ತು ವಿಶೇಷಗಳು ಇಡೀ ದೇಶದ ಗಮನವನ್ನು ಸೆಳೆಯುವುದರ ಮೂಲಕ ನಾಡಿನ ಸಾಂಸ್ಕೃತಿಕ ಸ್ಥಾನಮಾನವನ್ನು ಪಾರಂಪರಿಕವಾಗಿ, ಉಳಿಸಿಕೊಂಡು ಬಂದಿವೆ. ಈ ಸಾಂಸ್ಕೃತಿಕ ಪರಂಪರೆಯ ಸಾಲಿಗೆ ಸೇರುವ ಮತ್ತೊಂದು ವಸ್ತುವೆಂದರೆ "ಇಳಕಲ್ಲಸೀರೆ."

ಇಳಕಲ್ಲ ಸೀರೆಯಂತೆ ರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿ ಪಡೆದ ಸೀರೆಗಳೆಂದರೆ ಕಂಚಿ, ಧರ್ಮಾವರಂ, ಮೈಸೂರು, ಮೊಣಕಾಲ್ಮೂರು ಸೀರೆಗಳನ್ನು ಹೆಸರಿಸಬಹುದು. ಅದೇನೆ ಇದ್ದರೂ

ಕರ್ನಾಟಕದ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಇಳಕಲ್ಲು ಮೊದಲಿನಿಂದಲೂ ಸೀರೆಗಳ ತಯಾರಿಕೆಯಲ್ಲಿ ದೊಡ್ಡ ಹೆಸರು ಮಾಡಿದ ವ್ಯಾಪಾರಿ ಕೇಂದ್ರ. ಪ್ರಸ್ತುತ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಕಿರುಪ್ರಬಂಧ ಇಳಕಲ್ಲ ಸೀರೆಯನ್ನು ಕೇಂದ್ರವಾಗಿಟ್ಟುಕೊಂಡು ಅದರ ಸುತ್ತ ಹೆಣೆದುಕೊಂಡಿರುವ ಸಾಂಸ್ಕೃತಿಕ ಚಹರೆಗಳಾದ ನೇಕಾರಿಕೆ ಸಮುದಾಯದ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸ್ಥಾನಮಾನ, ನೇಯ್ಗೆಯ ಉಪಕರಣಗಳ ಸಿದ್ದತೆ, ಆಚರಣೆ, ನಂಬಿಕೆ, ಹಬ್ಬ, ಹರಿದಿನ, ಮತ್ತು ಸಾಹಿತ್ಯಿಕವಾಗಿ ಪ್ರಚಲಿತವಿರುವ ಗಾದೆ, ಲೋಕೋಕ್ತಿ, ಪಡೆನುಡಿ, ಮುಂತಾದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳುವುದರ ಮೂಲಕ ಪ್ರಾದೇಶಿಕ, ಚಾರಿತ್ರಿಕ, ಹಾಗೂ ಸಾಮಾಜಿಕ ಮಹತ್ವವನ್ನು ಇಲ್ಲಿ ಗುರುತಿಸಲಾಗುತ್ತದೆ.

ಇಳಕಲ್ಲಸೀರೆ ಕುರಿತು ಈಗಾಗಲೇ ಕನ್ನಡ ವಿಶ್ವವಿದ್ಯಾಲಯದಿಂದ ಡಾ.ಮಹೇಶ ತಿಪ್ಪಶೆಟ್ಟಿಯವರ ಮಂಟಪಮಾಲೆಯಲ್ಲಿ ಕಿರುಹೊತ್ತಿಗೆ ಬೆಳಕುಕಂಡಿದೆ. ಆದರೆ ಈ ಕೃತಿ ನೇರವಾಗಿ ಇಳಕಲ್ಲ ಸೀರೆಯ ಉತ್ಪಾದನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ನೇಕಾರರ ಸಾಮಾನ್ಯ ಇತಿಹಾಸ; ದೇವಾಂಗ ಸಮುದಾಯದ ಹುಟ್ಟು; ಇಳಕಲ್ಲಿನ ವಿಶೇಷತೆ; ಸೀರೆಯ ಅರ್ಥಶಾಸ್ತ್ರ, ಭವಿಷತ್ತಿನಲ್ಲಿ ಇಳಕಲ್ಲಸೀರೆಯ ಸ್ಥಿತಿಗತಿ ಕುರಿತಂತೆ ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ. ಆದರೆ ಇಳಕಲ್ಲ ಸೀರೆಯ ಸುತ್ತ ಹುಟ್ಟಿಕೊಂಡು ಬಂದ ನಂಬಿಕೆ, ಸಂಪ್ರದಾಯಗಳ ಸಾಂಸ್ಕೃತಿಕ ಚರಿತ್ರೆ ಇಲ್ಲಿ ಅನಾವರಣ ಗೊಂಡಿರುವುದಿಲ್ಲ. ಕೃತಿಯ ರಚನಾ ಸಂದರ್ಭ ಮತ್ತು ಉದ್ದೇಶ ಇದಕ್ಕೆ ಮುಖ್ಯ ಕಾರಣವಾಗಿರಬೇಕು. ಡಾ.ಕಂದಗಲ್ ಪಿ.ಎಸ್. ಅವರು "ಇಳಕಲ್ಲ ಸೀರೆ ಬಣ್ಣ ಹಾಗೂ ವಿನ್ಯಾಸ: ಒಂದು ಅಧ್ಯಯನ" ಎಂಬ ಅಧ್ಯಯನವನ್ನು ಕನ್ನಡ ವಿಶ್ವವಿದ್ಯಾಲಯದಿಂದ ಪೂರೈಸಿದ್ದಾರೆ. ಇವರ ಅಧ್ಯಯನವು ಸಾಂಸ್ಕೃತಿಕ ಆವರಣದಿಂದ ಹೊರಗುಳಿದು ಬಣ್ಣಗಾರಿಕೆಯಲ್ಲಿ ಇಳಕಲ್ಲ ಸೀರೆಗಳು ಅಳವಡಿಸಿಕೊಂಡ ವೈಜ್ಞಾನಿಕ ಅಂಶಗಳನ್ನು ಕೇಂದ್ರವಾಗಿಟ್ಟುಕೊಂಡು "ರಸಾಯನಶಾಸ್ತ್ರದ" ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ಇನ್ನೂ ಕರ್ನಾಟಕ ಚಿತ್ರಕಲೆಯ ಇತಿಹಾಸವನ್ನು ಕುರಿತು ಚರ್ಚೆ ಮಾಡಿದ ವಿದ್ವಾಂಸರೆಲ್ಲರೂ ಜನಪದ ಚಿತ್ರಕಲೆಯ ವೈಶಿಷ್ಟ್ಯ ಮತ್ತು ಸ್ವರೂಪವನ್ನು ಕುರಿತು ಮಾತನಾಡುವ ಸಂದರ್ಭದಲ್ಲಿ ತಪ್ಪದೇ ಇಳಕಲ್ಲ ಸೀರೆಯ ನೇಯ್ಗೆ ವಿಧಾನವನ್ನು, ಸೀರೆಯ ನಮೂನೆಗಳನ್ನು ಚರ್ಚಿಸಿದ್ದಾರೆ. ಇದನ್ನು ಕಸೂತಿಕಲೆ ಪ್ರಕಾರವಾಗಿ ಅಧ್ಯಯನಕ್ಕೆ ಒಳಪಡಿಸಿರುವುದುಂಟು.

ಈ ಮೇಲಿನ ಅಧ್ಯಯನಗಳನ್ನು ಗಮನಿಸಿದರೆ ಇಳಕಲ್ಲ ಸೀರೆಯ ತಾಂತ್ರಿಕ; ಸೌಂದರ್ಯ ಮತ್ತು ಸಮುದಾಯಿಕ ದೃಷ್ಟಿಯಿಂದ ಮಾತ್ರ ಅಧ್ಯಯನಗಳು ಸಾಗಿ ಬಂದಿವೆ. ಆದರೆ ನಮ್ಮ ಅಧ್ಯಯನ ಈ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಆಚರಣೆ, ನಂಬಿಕೆ, ಸಂಪ್ರದಾಯ, ಕುರಿತಾದ ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳನ್ನು ಬಳಸಿಕೊಂಡು ಸಾಂಸ್ಕೃತಿಕ ಅಧ್ಯಯನವನ್ನು ಮಾಡುವ ಉದ್ದೇಶವಾಗಿದೆ.

ಜನಪದರ ಬದುಕಿನ ರೀತಿಯನ್ನು ಬಿಂಬಿಸುವ ಜೀವಂತ ವ್ಯವಸ್ಥೆ ಜಾನಪದ. ಇದು ನಮ್ಮ ಸಂಸ್ಕೃತಿಯ ಒಂದು ಭಾಗ. ನಂಬಿಕೆ, ನಡಾವಳಿ, ವೇಷಭೂಷಣ, ಹಬ್ಬ-ಹರಿದಿನ, ಉಡುಗೆ-ತೊಡುಗೆ, ಇವುಗಳಿಂದ ಇದು ಪರಿಪೂರ್ಣವಾಗಿರುತ್ತದೆ. ಇಂತಹ ಪರಿಪೂರ್ಣತೆಯಿಂದ ಕೂಡಿದ ಸಂಸ್ಕೃತಿಯ ಅಧ್ಯಯನ ಮಾಡುವುದೆಂದರೆ ಅದು ಒಂದು ಜನಾಂಗದ ಜೀವನ ಪದ್ದತಿಯ ಅಧ್ಯಯನವನ್ನು ಮಾಡಿದಂತೆ. ಇಳಕಲ್ಲಿನ ನೇಕಾರರು ಇಂತಹ ಸಾಂಸ್ಕೃತಿಕ ಪರವಾದ ಬದುಕಿನ ಜೀವನ ಪದ್ಧತಿಯನ್ನು ತಾವು ತಯಾರಿಸುವ ಸೀರೆಯಲ್ಲಿ ನೇಯ್ದಿರುವುದರಿಂದ ಇಳಕಲ್ಲ ಸೀರೆಯ ಅಧ್ಯಯನ ಪರ್ಯಾಯವಾಗಿ ಅವರ ಸುಸಂಸ್ಕೃತ ಬದುಕಿನ ಅಧ್ಯಯನವೇ ಆಗುತ್ತದೆಂಬುದನ್ನು ಪ್ರಸ್ತುತ ಕಿರು ಪ್ರಬಂಧದಲ್ಲಿ ಸಾದರಪೂರ್ವಕವಾಗಿ ಚರ್ಚಿಸಲಾಗಿದೆ.

ನೇಯ್ಗೆ ಮೂಲತಃ ಕಲೆ ಎನಿಸಿಕೊಂಡರೂ ಇದು ಉದ್ಯಮವಾಗಲೂ ಸಾಧ್ಯವೆ ? ಎಂಬ ವಿಶ್ಲೇಷಣೆಯನ್ನು ಈ ಕಿರುಪ್ರಬಂಧದಲ್ಲಿ ಮಾಡಲಾಗಿದೆ. ಏಕೆಂದರೆ ಕೊಳ್ಳುವವನ ಬಯಕೆ ಬೇಡಿಕೆಗಳನ್ನು ಅವಲಂಬಿಸಿ ನಿರ್ಮಾಣವಾಗುವ ಯಾವುದೇ ವಸ್ತು ಕಲೆಯಲ್ಲ. ಈ ಅರ್ಥದಲ್ಲಿ ಸೀರೆಯನ್ನು ತಯಾರಿಸುವ ಇಳಕಲ್ಲ ನೇಕಾರರು ಆರಂಭದಲ್ಲಿ ಕಲಾವಿದರಾಗಿ ಇತ್ತೀಚೆಗೆ ಕುಶಲ ಕರ್ಮಿಗಳಾಗಿ ರೂಪಾಂತರಗೊಂಡ ಬಗೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ನೇಕಾರಿಕೆ ಕುಶಲ ಕರ್ಮಿಗಳ ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸ್ಥಾನಮಾನಗಳಂತಹ ಹೊರಮೈ ಬದುಕಿನ ಜೊತೆಗೆ ಸಾಂಸ್ಕೃತಿಕ ಪರವಾದ ಒಳಮೈ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ಇಳಕಲ್ಲ ಸೀರೆಯ ತಯಾರಿಕೆಯ ಹಿಂದೆ ಅನೇಕ ರೀತಿಯ ತಾಂತ್ರಿಕ ಮತ್ತು ತಾತ್ವಿಕ ಅಂಶಗಳು ಮುತ್ತಿಕೊಂಡಿವೆ. ಬಣ್ಣಗಳ ತಯಾರಿಕೆ, ಬಣ್ಣಕಟ್ಟುವ ವಿಧಾನ, ಸೀರೆಯ ನಮೂನೆ, ವಡ್ಲು, ದಡಿ, ಸೆರಗು, ಮುಂತಾದವುಗಳ ವಿನ್ಯಾಸಗಳ ತಾಂತ್ರಿಕ ಅಂಶಗಳನ್ನು ಇಲ್ಲಿ ಚರ್ಚಿಸುವುದರ ಜೊತೆಗೆ ತಾತ್ವಿಕವಾಗಿ ಕೆಲಸದ ಆರಂಭದಲ್ಲಿ ಕೈಗೊಳ್ಳುವ ಧಾರ್ಮಿಕ ವಿಧಿ ವಿಧಾನಗಳು ವರ್ಷದುದ್ದಕ್ಕೂ ಸೀರೆಯ ಪರವಾಗಿ ಆಚರಿಸುವ ಆಚರಣೆಗಳಂಥ ಅಂಶಗಳನ್ನು ಈ ಕಿರು ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ. ಈ ಎರಡು ಕ್ಷೇತ್ರಗಳಲ್ಲಿ ಇಳಕಲ್ಲ ಸೀರೆ ಬೆಳೆಸಿಕೊಂಡು ಬಂದ ರೀತಿಯನ್ನು ಅಧ್ಯಯನ ಮಾಡುವುದೆಂದರೆ, ಕನ್ನಡಿಗರಿಗೆ ಪರಿಚಯವಿದ್ದ ಸ್ಥಳೀಯ ಸಾಮಗ್ರಿಗಳು ಅವುಗಳ ಉಪಯೋಗ, ಸಂರಕ್ಷಣೆ, ಉಪ-ಉತ್ಪಾದನೆಗಳಾಗಿ ಬಳಸಿಕೊಳ್ಳುವ ಜಾಣತನ ಇತ್ಯಾದಿ ವೈಚಾರಿಕ ಮತ್ತು ಪಾರಂಪರಿಕ ಪ್ರಜ್ಞೆ ಯನ್ನು ಕಟ್ಟಿಕೊಡುವ ಮಹತ್ವದ ಆಶಯವನ್ನು ಈ ಕಿರು ಪ್ರಬಂಧದಲ್ಲಿ ಪೂರೈಸಲಾಗಿದೆ.

ಒಟ್ಟಿನಲ್ಲಿ "ಇಳಕಲ್ಲ ಸೀರೆ: ಸಾಂಸ್ಕೃತಿಕ ಅಧ್ಯಯನ" ಪ್ರಾದೇಶಿಕ, ಚಾರಿತ್ರಿಕ, ಔದ್ಯೋಗಿಕ ದೃಷ್ಟಿಯಿಂದ ಸಾಂಸ್ಕೃತಿಕವಾಗಿ ನಿರ್ವಚಿಸಿದ ಕಿರುಪ್ರಬಂಧವಾಗಿದೆ. ಹೀಗಾಗಿ ನಾಡಿನ ವಿಶೇಷಗಳಾದ ಮಂಗಳೂರುಹಂಚು, ಮುಧೋಳನಾಯಿ, ಕಿನ್ನಾಳ ಗೊಂಬೆಯಂತಹ ವಿಷಯವಸ್ತುಗಳನ್ನು, ಕುರಿತು ನಮ್ಮ ಅಧ್ಯಯನ ಸಾಗಬೇಕಾಗಿದೆ. ಆ ಮೂಲಕ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸುವುದು ಅಗತ್ಯವೆಂಬುದನ್ನು ಪ್ರಸ್ತುತ ಕಿರು ಪ್ರಬಂಧದ ಮೂಲಕ ಸಮಾಲೋಚಿಸಲಾಗಿದೆ.

## ಅಧ್ಯಾಯ : ಎರಡು

# ಇಳಕಲ್ಲ ಪ್ರಾದೇಶಿಕ ಅಧ್ಯಯನ

ಸ್ಥಳ ನಾಮಗಳು ಚಾರಿತ್ರಿಕವಾಗಿ ಉಜ್ವಲ ಪರಂಪರೆಯನ್ನು ಹೊಂದಿರುತ್ತವೆ. ಈ ದೃಷ್ಟಿಯಿಂದ ಅರ್ಥವಿಲ್ಲದ ಸ್ಥಳನಾಮ ಇರಲಿಕ್ಕೆ ಸಾಧ್ಯವೇ ಇಲ್ಲ ಎಂಬ ನಿರ್ಣಯಕ್ಕೆ ಬರಬಹುದಾಗಿದೆ. ಪೌರಾಣಿಕ ಕತೆಗಳು, ಐತಿಹಾಸಿಕ ಘಟನೆಗಳು, ಧರ್ಮ, ನಂಬಿಕೆಗಳ ಮಾಹಿತಿಗಳು ಇತ್ಯಾದಿ ಸಂಗತಿಗಳಿಂದ ಸ್ಥಳನಾಮದ ನಿಷ್ಪತ್ತಿಯಾಗಿರುತ್ತದೆ. ಇವುಗಳನ್ನು ಬಿಟ್ಟರೂ ಸಮುದಾಯ, ಭೌಗೋಳಿಕ ಮತ್ತು ನಿಸರ್ಗವಾದ ಸ್ಥಳನಾಮಗಳು ರಚನೆಗೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಸ್ಥಳನಾಮಗಳ ಅಧ್ಯಯನವೆಂದರೆ ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಎನಿಸುತ್ತದೆ.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಇಳಕಲ್ಲ ಒಂದು ಪ್ರಮುಖ ವಾಣಿಜ್ಯ ಕೇಂದ್ರ, ಇದರ ಜೊತೆಗೆ ಧಾರ್ಮಿಕ ಕೇಂದ್ರವೂ ಹೌದು. ಮಠ, ಮಂದಿರಗಳಿಂದ, ದರ್ಗಾ, ಮಸೀದಿಗಳಿಂದ ಕೂಡಿದ ಇಳಕಲ್ಲ ನಗರವು ಒಂದು ಸಾಂಸ್ಕೃತಿಕ ಗೌರವಕ್ಕೆ ಪಾತ್ರವಾಗಿದೆ. ಇಳಕಲ್ಲ ಎಂಬ ಹೆಸರು ಅನರ್ಥಕವಾದ ನಾಮವಿಶೇಷವಾಗಿದೆ. ಗೆಝೇಟಿಯರ್‌ಗಳಲ್ಲಿ "ಇಲಕಲ್ಲ" ಎಂಬ ಹೆಸರನ್ನು ಉಲ್ಲೇಖಿಸಲಾಗಿದೆ. ಆದರೆ ಈಗ ಶ್ರೀಸಾಮಾನ್ಯರು "ಇಳಕಲ್ಲ" ಎಂದು ಸಂಭೋದಿಸುತ್ತಾರೆ. ಇದಕ್ಕೆ "ಲ" ಕಾರ ಮತ್ತು "ಳ" ಕಾರಗಳ ಬಳಕೆಯ ಸಾಮ್ಯತೆ ಕಾರಣವಿರಬಹುದು. ಅದೇನೇ ಇದ್ದರೂ ಇದು

ನಿಸರ್ಗವಾಚಿ ಪದ. ಕೊಡೆಕಲ್ಲು, ಯರಗಲ್ಲು, ಬನ್ನಿಕಲ್ಲು ಗ್ರಾಮನಾಮಗಳಂತೆ ಇದು ನಿಸರ್ಗವಾಚಿ ಗ್ರಾಮನಾಮವಾಗಿ ಸುಮಾರು ೬ಚದರ ಕಿ.ಮೀ. ವಿಸ್ತೀರ್ಣವನ್ನು ಹೊಂದಿರುವ ಇಳಕಲ್ಲ ನಗರ ೧೯೯೭ರಲ್ಲಿ ಬಿಜಾಪೂರ ಜಿಲ್ಲೆಯಿಂದ ಬಾಗಲಕೋಟೆ ಜಿಲ್ಲೆಗೆ ಸೇರ್ಪಡೆಯಾಯಿತು. ಅದಕ್ಕೂ ಪೂರ್ವದಲ್ಲಿ ಕ್ರಿ.ಶ. ೧೮೩೦ ರವರೆಗೆ ಧಾರವಾಡ ಜಿಲ್ಲೆಯ ಒಂದು ಭಾಗವಾಗಿದ್ದು, ೧೮೩೮ರಲ್ಲಿ ಬೆಳಗಾವಿ ವಿಭಾಗಕ್ಕೆ ಸೇರಿಸಲಾಯಿತು. ಕ್ರಿ.ಶ. ೧೮೬೮ ರಲ್ಲಿ ಬಿಜಾಪೂರ ಜಿಲ್ಲೆ ಅಸ್ಥಿತ್ವಕ್ಕೆ ಬಂದ ನಂತರ ಹುನಗುಂದ ತಾಲ್ಲೂಕಿನ ಪ್ರಮುಖ ಪಟ್ಟಣವಾದ ಇಳಕಲ್ಲು ಬಿಜಾಪುರ ಜಿಲ್ಲೆಯ ವ್ಯಾಪ್ತಿಗೆ ಬಂದಿತು. ಐತಿಹಾಸಿಕವಾಗಿ ಬಾಗಲಕೋಟೆ ಜಿಲ್ಲೆ ಪ್ರಸಿದ್ಧಿ ಹೊಂದಿದ್ದರೂ ಇಳಕಲ್ಲಗೆ ಅಂಥ ಯಾವುದೇ ಪ್ರಾಚೀನ ಇತಿಹಾಸ ಕಂಡುಬರುವುದಿಲ್ಲ. ೧೮೦೩ ರಲ್ಲಿ ಇಳಕಲ್ಲು ಕೋಟೆಯಲ್ಲಿರುವ ಶಾಸನ ಅಲ್ಲಿಯ(ಕುಪಣಿ) ಕಂಪನಿ ಸರ್ಕಾರದ ಆಳ್ವಿಕೆಗೆ ಒಳಗಾಗಿದ್ದು, ಅಧಿಕಾರಿಗಳ ಅನುಮತಿಯಂತೆ ಅಗಸಿ ಬಾಗಿಲನ್ನು ಕಟ್ಟಿಸಿದ ಉಲ್ಲೇಖ ತಿಳಿದು ಬರುತ್ತದೆ.

**ಮೊದಲ ಭಾಗ**

ಸ್ವಸ್ತಿ ಶ್ರೀ ನೃಪಶಾಲಿವಹನಶಕವಾಣಾ
ಕ್ಷಿ. ಮುನಿ ಭೂಮಿ ಕಾಂತ ವಷಾಃ॥ ಫಸಲಿ
ನಯನಾಂಗ್ ಮುನಿಚಂದ್ರಮೇತಿ ಇಸವಿ ನೇ
ತ್ರೆ ಷ ವರ್ಗಣೇಕಚೇರ॥ ಶ್ರೇಷ್ಠಮಾಸ ಅಸಿ,
ತಪಕ್ಷೆ ತ್ರಿಶತ್ಸಖ್ಯಾ ಮಿತೇ ಸೋಮ್ಯ ದಿ,
ನೇ ರೌದ್ರ ನಕ್ಷತ್ರೇ ಅಚಲ ಯೋಗ ನಾಗವಾ,
ಕರ್ಣಾಯುತ ಶುಭ ದಿನೇ ಶುಭ ಮಹೋರ್ತೆಸಂ
ಪೂರ್ಣಮಸ್ತು ॥ ಶ್ರೀ ॥ ಶ್ರೀ ॥ ಶ್ರೀ ॥

**ಎರಡನೆಯ ಭಾಗ**

ಕುಪಣಿ ಸರಕಾರ ರಂ ಗ್ರೇ
ಜಬಾಹದರ ವಿದ್ಯಾ ಮಾನ
ಜನ(ತ) ನಲುಕತ ಇಚಿ
ರರಾಟ ಸಾಹೇಬು ಕಲೇಕಟ
ರ(ಚ) ಟಕರ ಸಾಹೇಬು ೧ ॥ ಅ
ಕಂ ॥ ಪೂರ್ಜಟ ಸಾಹೇಬು..ಸು
ಅಂ. ಶ್ರೀನಿವಾಸರಾವ್ ಮಾ
ಹಲಕೇರೀ ಇವರ ಅನುಮತಾದಿಂ
ದೆಂ। ವೆಂ।ಗೌಡರು ೧೩।ಪಂ.
ಚೆರು ೩.೩ ಜನರು ಅನಂ
ತಪುರ ಸಾಟಿಯಲ್ಲೇ. ಇ.
ರುವಾ ಸಭಾ ವಿತರ ಸಾಹಾ
ಯದಿಂದಾ ಅರಮನಿಯವರ
ಪ್ರೇರಣಿ ಇಂದಾ ಹುನಗುಂದಾ ಅಗ
ಸಿ ಬಾಗಿಲು ಅತಿ ಸಂತೋಷದಿಂದಾ ಕಟ್ಟಿಸಿ
ಅದೇಂ ॥ ಛ ॥ ಛ॥ [೧]

ಹೀಗಾಗಿ ಇಳಕಲ್ಲು ಕಂಪನಿ ಸರಕಾರದ ಆಡಳಿತ ಕೇಂದ್ರವಾಗಿದ್ದುದು ಇದರಿಂದ ತಿಳಿದು ಬರುತ್ತದೆ. "ಮುಂಬೈ ಸರಕಾರದ ಸಾಮಾನ್ಯ ಇಲಾಖೆಯ ಮುನಿಸಿಪಲ್ ಯಾಕ್ಟ್ ಜಿ.ಆರ್.ನಂ.೨೬,೧೮೫೦ ರಪ್ರಕಾರ ಇಳಕಲ್ಲ ನಗರ ಸಭೆಯು ದಿನಾಂಕ: ೧.೩.೧೮೬೮ ರಂದು ಸ್ಥಾಪಿಸಲ್ಪಟ್ಟಿತು. ಶಾಸನಬದ್ದ ಆಡಳಿತ, ಸುವ್ಯವಸ್ಥೆ, ಬ್ರಿಟೀಷ್ ಸರಕಾರದ ಕನಸು ಅಂದು ಬೀಜಾಂಕುರಗೊಂಡಿತು ಅಂದು ರೂಪಗೊಂಡ ನಗರ ಸಭೆ ಜನತೆಯ ಪ್ರಾತಿನಿಧ್ಯವನ್ನೇ ಪ್ರತಿನಿಧಿಸದೇ ಬ್ರಿಟೀಷ್ ಸರಕಾರದ ಆಡಳಿತ ಸುವ್ಯವಸ್ಥೆಯ ಸುಧಾರಣೆ ನೆಪದಲ್ಲಿ ರೂಪಗೊಂಡಿತು. ಅಂದು ರೂಪಗೊಂಡ ಈ ನಗರಸಭೆ ಬಿಜಾಪುರ ಜಿಲ್ಲೆಯಲ್ಲಿ ಮೂರನೇಯದಾಗಿತ್ತು." [೨]

ಇಳಕಲ್ಲ ನಗರದಲ್ಲಿ ಶೈಕ್ಷಣಿಕ ಕೇಂದ್ರಗಳು ಅಸ್ಥಿತ್ವದಲ್ಲಿದ್ದು, ಅವುಗಳಲ್ಲಿ ಶ್ರೀವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಸ್ಥೆಯು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾಗಿದೆ. ಈ ಸಂಸ್ಥೆಯ ಆಶ್ರಯದಲ್ಲಿ ಶ್ರೀವಿಜಯ ಮಹಾಂತೇಶ್ವರ ಕಲಾ ವಾಣಿಜ್ಯ ಹಾಗೂ ವಿಜ್ಞಾನ ಮಹಾವಿದ್ಯಾಲಯ, ಶ್ರೀಜಗದ್ಗುರು ಗಂಗಾಧರ ಮೂರುಸಾವಿರಮಠ ಕೈಗಾರಿಕಾ ತರಬೇತಿ ಸಂಸ್ಥೆ, ಶ್ರೀವಿಜಯ ಮಹಾಂತೇಶ್ವರ ಸೆಂಟ್ರಲ್ ಸ್ಕೂಲ್,

ಶ್ರೀವಿಜಯ ಮಹಾಂತೇಶ್ವರ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆ, ಶ್ರೀಎಸ್.ಆರ್. ಕಂಠಿ ಶಿಕ್ಷಣ ಮಹಾವಿದ್ಯಾಲಯ, ಶ್ರೀಎಸ್.ಆರ್. ಕಂಠಿ ಬಾಲಕೀಯರ ಪ್ರೌಢಶಾಲೆ, ಶ್ರೀವಿಜಯ ಮಹಾಂತೇಶ್ವರ ಕಲಾ ಹಾಗೂ ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಶ್ರೀವಿಜಯ ಮಹಾಂತೇಶ್ವರ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಶ್ರೀವಿಜಯಮಹಾಂತೇಶ್ವರ ವ್ಯವಹಾರ ಹಾಗೂ ಆಡಳಿತ ನಿರ್ವಹಣೆ ಮಹಾವಿದ್ಯಾಲಯ, ಶ್ರೀವಿಜಯಮಹಾಂತೇಶ್ವರ ಪದವಿಪೂರ್ವ ಕಾಲೇಜು, ಶ್ರೀವಿಜಯಮಹಾಂತೇಶ್ವರ ಶಿಶುವಿಹಾರ ಕೇಂದ್ರ, ಶ್ರೀರಾಮಪ್ಪ, ಪರಪ್ಪ, ಕರಡಿ ಆಯುರ್ವೇದ ಆಸ್ಪತ್ರೆ ಮುಂತಾದವು ತಲೆಯೆತ್ತಿ ಈ ಭಾಗದ ಗ್ರಾಮೀಣ ಬಡ ವಿದ್ಯಾರ್ಥಿಗಳ ಶೈಕ್ಷಣಿಕ ಬೆಳವಣಿಗೆಗೆ ಕಾರಣವಾಗಿವೆ. ಅದೇ ರೀತಿ ಸರಕಾರಿ ಪದವಿ ಪೂರ್ವ ಕಾಲೇಜುಗಳು, ಮುರ್ತುಜಾ ಖಾದ್ರಿ ಶಿಕ್ಷಣ ಸಂಸ್ಥೆಯ ಉರ್ದು ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಕಾಲೇಜು, ಆದರ್ಶ ಶಿಕ್ಷಣ ಸಂಸ್ಥೆ, ಗಾಯತ್ರಿ ಮಹಿಳಾ ಮಂಡಳ, ಪದ್ಮಸಾಲಿ ಸಮಾಜ, ಬಸವೇಶ್ವರ ಶಿಕ್ಷಣ ಸಂಸ್ಥೆ, ಜೆ. ಸಿ. ಸಂಸ್ಥೆ, ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಎಜುಕೇಷನ್ ಸೊಸೈಟಿ ಮುಂತಾದ ಸಂಘ ಸಂಸ್ಥೆಗಳು ವ್ಯವಸ್ಥಿತವಾಗಿ ಶೈಕ್ಷಣಿಕ ಪ್ರಸಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ.

ಧಾರ್ಮಿಕವಾಗಿ ಇಳಕಲ್ಲಿನಲ್ಲಿ ಲಿಂಗೈಕ್ಯ ಶ್ರೀವಿಜಯ ಮಹಾಂತೇಶ್ವರ ಮಹಾಶಿವಯೋಗಿಗಳ ಗದ್ದುಗೆ ಮತ್ತು ಮುರ್ತುಜಾ ಷಾ ಖಾದ್ರಿಯವರ ದರ್ಗಾ ತುಂಬಾ ಪ್ರಸಿದ್ದಿಯಾಗಿವೆ. ಈ ಎರಡು

ಧಾರ್ಮಿಕ ಕ್ಷೇತ್ರಗಳಿಗೆ ವೀರಶೈವರು, ಮುಸ್ಲಿಂರು, ಬ್ರಾಹಣರು, ಸ್ವಕುಳಸಾಲಿ, ತೊಗಟವೀರ, ಪದ್ಮಸಾಲಿ, ಕುರುಹೀನಶೆಟ್ಟಿ, ಮಾರ್ವಾಡಿ, ಸೋಮವಂಶಕ್ಷತ್ರಿಯರು, ಭಾವಸಾರಕ್ಷತ್ರಿಯರು, ವಿಶ್ವಕರ್ಮರು, ವಾಲ್ಮೀಕಿಗಳು, ಕುಂಚಿಕೊರವರು, ಕುರುಬರು, ಇನ್ನೂ ಹಿಂದುಳಿದ ಅನೇಕ ಜನಾಂಗದವರು ಪೂಜ್ಯ ಭಾವನೆಯನ್ನು ತಳೆದಿದ್ದಾರೆ. ಹಾಗೆಯೇ ಬನಶಂಕರಿ ದೇವಸ್ಥಾನ, ಬಸವಣ್ಣ ದೇವರಗುಡಿ, ವೆಂಕೋಬದೇವಸ್ಥಾನ, ಜಡಿಶಂಕರಲಿಂಗ ದೇವಸ್ಥಾನ, ಮಾರ್ಕಡೇಶ್ವರ ದೇವಸ್ಥಾನ, ಲಕ್ಷ್ಮೀ ದೇವಸ್ಥಾನ, ನೀಲಕಂಠೇಶ್ವರ ದೇವಸ್ಥಾನ, ಶ್ರೀರಾಮದೇವಸ್ಥಾನ, ಅಂಬಾಭವಾನಿ ದೇವಸ್ಥಾನ, ಜಗದೀಶ ದೇವಸ್ಥಾನ, ಕಾಳಿಕಾ ದೇವಸ್ಥಾನ, ಮಲ್ಲಿಕಾರ್ಜುನ ದೇವಸ್ಥಾನ, ದತ್ತಾತ್ರೇಯ ಮಂದಿರ, ಚೌಡಮ್ಮ ದೇವಸ್ಥಾನ, ಮಹಾವೀರ ಜೈನಭವನ, ಸಾಲೇಶ್ವರ ಗುಡಿ, ಹನುಮಂತ ದೇವರ ಗುಡಿ, ದೇವಾಂಗ ಮಠ, ಮುಂತಾದುವು ಜನರ ಶ್ರದ್ದೆ, ನಂಬಿಕೆ ಭಕ್ತಿಯ ಪ್ರತೀಕವಾಗಿ ನಿರ್ಮಾಣಗೊಂಡಿವೆ. ಹಬ್ಬ, ಹರಿದಿನಗಳಲ್ಲಿ ಭಜನೆ, ಪುರಾಣ, ಪುಣ್ಯಕಥೆಗಳನ್ನು ಪ್ರಸಾರ ಮಾಡಲಾಗುತ್ತದೆ.

ಇಳಕಲ್ಲಿನಲ್ಲಿ ನಡೆಯುವ ಮಹಾಂತಸ್ವಾಮಿಗಳ ಜಾತ್ರೆ ತುಂಬಾ ಪ್ರಸಿದ್ಧಿಯಾಗಿದೆ. ಶ್ರಾವಣಮಾಸದ ಕೊನೆ ಸೋಮವಾರ ಮತ್ತು ಮರುದಿನ ಚಿತ್ತರಗಿ ಮಹಾಂತಪ್ಪನವರ ಜಾತ್ರೆ ನೆಡೆಯುತ್ತದೆ. ಜಾತ್ರೆ ನೆಡೆಯುವ ಹತ್ತು ದಿನಕ್ಕೆ ಮೊದಲು ಊರ ಹೊರಗಿನ ಹೊಳೆ ದಂಡೆಯಲ್ಲಿರುವ ಬಸವ ಮಂಟಪಕ್ಕೆ ಬಸವಣ್ಣನ ಭಾವ ಚಿತ್ರದೊಂದಿಗೆ ಮೆರವಣಿಗೆಯಲ್ಲಿ ಜನರು ಆಗಮಿಸುತ್ತಾರೆ. ಇಲ್ಲಿಂದಲೇ ಜಾತ್ರೆಯು ಆರಂಭವಾಗುತ್ತದೆ. ಜಾತ್ರೆಯ ಮೊದಲ ದಿನದಂದು ಗದ್ದುಗೆ ಪೂಜೆ ಅಂದರೆ ಶ್ರೀವಿಜಯ ಮಹಾಂತೇಶ್ವರನ ಸ್ಮರಣೆ ಮಾಡಲಾಗುತ್ತದೆ. ಇಲ್ಲಿರುವ ಎರಡು ರಥಗಳನ್ನು ಅಲಂಕರಿಸಿ, ದೊಡ್ಡದಾದ ರಥದಲ್ಲಿ ಶ್ರೀವಿಜಯ ಮಹಾಂತೇಶ್ವರರ ಚಿಕ್ಕ ಲೋಹದ ಮೂರ್ತಿಯನ್ನಿಟ್ಟು ರಥವನ್ನು ಎಳೆಯಲಾಗುತ್ತದೆ. ಹಗ್ಗದ ಸೇವೆ, ಉದ್ದ ಪಲ್ಲಕ್ಕಿ, ಚಾಮರ ಸೇವೆ, ವೀರಗಾಸೆ ಮುಂತಾದ ವಿಶೇಷ ಕಾರ್ಯಕ್ರಮಗಳು ನಡೆಯುತ್ತವೆ. ಇವುಗಳ ಜೊತೆಗೆ ಪ್ರವಚನ, ವಚನಗಾಯನ, ಶರಣಸಿದ್ದಾಂತ ವಿಶೇಷ ಉಪನ್ಯಾಸಗಳಲ್ಲದೇ ಡೊಳ್ಳಿನ ಮೇಳಗಳ ಪ್ರದರ್ಶನ, ಸಮಾಳವಾದ್ಯಗಳ ಸೇವೆ, ಹಲಗೆ ಮಜಲಿನ ವೈಭವ, ಜೋಡುಕುದುರೆಗಳ ಕುಣಿತ, ಇತ್ಯಾದಿ ಜಾನಪದ ಆಚರಣೆಗಳನ್ನು ಮಹೋತ್ಸವದಂದು ಪ್ರದರ್ಶಿಸಲಾಗುತ್ತದೆ. ವೀರಶೈವ ಸಂಸ್ಥೆಯಂತೆ ಮುಸ್ಲಿಂ ಬಾಂಧವರ ಹತ್ತಾರು ದರ್ಗಾಗಳು ಇಲ್ಲಿ ನಿರ್ಮಾಣಗೊಂಡಿವೆ. ಶ್ರೀಹಜರತ್ ಸಯ್ಯದ್ ಶಾಹಾ, ಮುರ್ತುಜಾ ಖಾದ್ರಿ ದರ್ಗಾ, ಮದೀನಾ ಮಸೀದಿ, ಜಾಮೀಯಾ ಮಸೀದಿ, ಇಬ್ರಾಹಿಂ ಮಸೀದಿ, ಯಮನೂರ ಪೀರದರ್ಗಾ ಮುಂತಾದ ದರ್ಗಾ, ಮಸೀದಿಗಳು ಉರುಸು, ಉತ್ಸವಗಳಲ್ಲಿ ಎಲ್ಲಾ ಮತಬಾಂಧವರ ಸಾಂಸ್ಕೃತಿಕ ಕೇಂದ್ರಗಳಾಗಿ ಪಾತ್ರವಹಿಸಿವೆ.

ಸೀರೆಗಳಂತೆ ಇಲ್ಲಿಯ ಮತ್ತೊಂದು ಶ್ರೀಮಂತ ಉದ್ದಿಮೆ 'ಗ್ರಾನೈಟ್'. ರಾಷ್ಟ್ರೀಯ ಹೆದ್ದಾರಿ ನಗರಕ್ಕೆ ಹೊಂದಿಕೊಂಡಿರುವುದರಿಂದ ಸಾರಿಗೆಯ ಸಂಪರ್ಕ ರಾಷ್ಟ್ರೀಯ ವ್ಯಾಪಕತೆಯನ್ನು ಪಡೆದು

ಹೈದ್ರಾಬಾದ್, ಸೊಲ್ಲಾಪುರ, ಸಾಂಗ್ಲಿ, ಬಳ್ಳಾರಿ, ಬೆಂಗಳೂರು, ಮಂಗಳೂರು, ಗುಲ್ಬರ್ಗಾ, ಗೋವಾ, ಮುಂಬೈ ಇನ್ನೂ ಮುಂತಾದ ನಗರಗಳಿಗೆ ಸಾರಿಗೆ ಸಂಪರ್ಕಗಳಿವೆ. ೧೯೭೧ ರಲ್ಲಿ ಗ್ರಾನೈಟ್ ಉದ್ದಿಮೆ ಆರಂಭಗೊಂಡು ಅಲ್ಲಿಂದ ಸುಮಾರು ನಾಲ್ಕು ದಶಕಗಳ ಅವಧಿಯಲ್ಲಿ ಒಂದು ವಾಣಿಜ ವ್ಯವಹಾರವಾಗಿ ರಾಷ್ಟ್ರೀಯ ಆರ್ಥಿಕ ಬೆಳವಣಿಗೆಗೆ ಕೈಜೊಡಿಸಿದೆಂದು ಹೇಳಬಹುದು. ಒಂದು ಅಂದಾಜಿನ ಪ್ರಕಾರ ೧೯೯೧ರಲ್ಲಿ ನಲವತ್ತುಸಾವಿರ ಜನಸಂಖ್ಯೆಯುಳ್ಳ ಈ ನಗರ ಈಗ ಅರವತ್ತು ಸಾವಿರಕ್ಕೂ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವುದಕ್ಕೆ ಕಾರಣ, ಗ್ರಾನೈಟ್‌ಉದ್ದಿಮೆ ಎಂದರೆ ತಪ್ಪಾಗುವುದಿಲ್ಲ.

ಕಪ್ಪು ಮಿಶ್ರಿತ ಬಂಗಾರ ವರ್ಣದ ಅತ್ಯಂತ ಅಧಿಕ ಬೆಲೆ ಬಾಳುವ ಈ ಖನಿಜ ಸಂಪತ್ತು ದೇಶ ವಿದೇಶಗಳಿಂದ ಬಂಡವಾಳಗಾರರನ್ನು ಇಲ್ಲಿಗೆ ಬರಮಾಡಿಕೊಂಡಿದೆ. ಸುಮಾರು ಮುನ್ನೂರು ಎಕರೆ ಪ್ರದೇಶದಲ್ಲಿ ಇಪ್ಪತ್ತೈದು ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಗ್ರಾನೈಟ್ ಕಲ್ಲನ್ನು ಹೊರ ತೆಗೆಯಲಾಗುತ್ತದೆ. ಇದರಿಂದ ಸಾವಿರಾರು ಜನರಿಗೆ ಉದ್ಯೋಗದ ಅವಕಾಶಗಳು ನಿರ್ಮಾಣಗೊಂಡಿವೆ.

ಗ್ರಾನೈಟ್ ಉದ್ದಿಮೆಯಂತೆ ಬಹು ಪ್ರಾಚೀನ ಉದ್ದಿಮೆಯಾದ ಸೀರೆಯ ನೇಕಾರಿಕೆ ಇಲ್ಲಿಯ ವಿಶೇಷತೆ. ಇಳಕಲ್ಲು ಸೀರೆಗಳ ತವರೂರು. ಇಲ್ಲಿ ತಯಾರಾದ ಸೀರೆಗಳಿಗೆ ಹೊರ ರಾಜ್ಯಗಳಲ್ಲಿಯೂ ಗೌರವ ಇದೆ. 'ಇಳಕಲ್ಲ ಸೀರೆ ಗುಳೇದ ಗುಡ್ಡದ ಖಣ' ಎಂಬ ಗಾದೆಮಾತು ಇಳಕಲ್ಲ ಸೀರೆಗಳಿಗೆ, ಗುಳೇದಗುಡ್ಡ ಖಣಕ್ಕೆ ಪ್ರಸಿದ್ಧಿಯಾದುದು ತಿಳಿದು ಬರುತ್ತದೆ. ಇದರರ್ಥ ಆಚರಣೆ, ನಂಬಿಕೆ, ಸಂಪ್ರದಾಯಗಳ, ದೃಷ್ಠಿಯಿಂದಲೂ ಸಾಂಸ್ಕೃತಿಕ ಗೌರವಕ್ಕೆ ಇವು ಪಾತ್ರವಾಗಿವೆ. ಈ ಉದ್ದಿಮೆಯಲ್ಲಿ ಸುಮಾರು ಇಪ್ಪತ್ತುಸಾವಿರ ನೇಕಾರ ಕುಟುಂಬಗಳು ತೊಡಗಿಸಿಕೊಂಡಿವೆ. ಅದರಲ್ಲಿ ವೃತ್ತಿಪರ ನೇಕಾರರು ಸುಮಾರು ಹತ್ತುಸಾವಿರ ಜನರು ಮಾತ್ರ. ಇನ್ನೂ ಸೀರೆ ವ್ಯಾಪಾರಸ್ಥರು ೩೦೦ ಜನರು ಮಾತ್ರ. ವೈವಿಧ್ಯಮಯವಾದ ಇಲ್ಲಿಯ ಸೀರೆಗಳಲ್ಲಿ ನೂಲು, ಚಮಕಾ, ರೇಷ್ಮೆಯನ್ನು ಬಳಸಲಾಗುತ್ತದೆ. ಈ ಕಿರುಪ್ರಬಂಧ ಇಳಕಲ್ಲ ಸೀರೆ: ಸಾಂಸ್ಕೃತಿಕ ಅಧ್ಯಯನಕ್ಕೆ ಮೀಸಲಾಗಿರುವುದರಿಂದ ಮುಂದಿನ ಅಧ್ಯಾಯಗಳಲ್ಲಿ ಈ ಕುರಿತು ವಿವರವಾಗಿ ಚರ್ಚಿಸಲಾಗಿದೆ.

**ಟಿಪ್ಪಣಿ**

೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯ (ಬಾಗಲಕೋಟೆ ಜಿಲ್ಲೆ)

೨. ಇಳಕಲ್ಲ ನಗರಸಭೆಯ ಶತಮನೋತ್ಸವ (ಸ್ಮರಣಸಂಚಿಕೆ) ಪ್ರ. ಸಂ.ಬಿ.ಎ. ಬಿಜ್ಜಲ ಪುಟ ೩

# ಅಧ್ಯಾಯ : ಮೂರು

# ಇಳಕಲ್ಲ ನೇಕಾರಿಕೆ: ಚಾರಿತ್ರಿಕ ಅಧ್ಯಯನ

## ೩.೧ ನೇಕಾರರ ಪೌರಾಣಿಕ ಹಿನ್ನೆಲೆ

ಪ್ರಾಚೀನ ಕರ್ನಾಟಕದ ಜನಾಂಗಿಕ ಬದುಕು ವೈವಿಧ್ಯಮಯವಾಗಿದೆ. ಕೃಷಿ, ವಾಣಿಜ್ಯ ಪ್ರಧಾನವಾಗಿ ಕಂಡು ಬಂದರೂ ಅನೇಕ ಕರಕುಶಲ ಮತ್ತು ಜೀವನೋಪಾಯದ ಅಗತ್ಯತೆಗಳನ್ನು ಅನುಲಕ್ಷಿಸಿ ಬಣ್ಣಗಾರಿಕೆ, ನೇಯ್ಗೆ, ಹೆಣಿಗೆ ಮುಂತಾದ ಕಲೆಗಳನ್ನು ಆಶ್ರಯಿಸಿದ ಜನಾಂಗ ನಮ್ಮಲ್ಲುಂಟು. ಇಂತಹ ಸಮೂಹದಲ್ಲಿ ನೇಕಾರಿಕೆ ಜನಾಂಗವು ಒಂದು. ಕೃಷಿಯನ್ನು ಬಿಟ್ಟರೆ ಅತೀ ಹೆಚ್ಚು ಉದ್ಯೋಗವನ್ನು ಸೃಷ್ಠಿಸುವ ನೇಕಾರಿಕೆ ಭಾರತದ ಮಹತ್ವದ ಗುಡಿಗಾರಿಕೆಯಾಗಿದೆ. ಈ ಜನಾಂಗದಲ್ಲಿ ಅರ್ಧಭಾಗದಷ್ಟು ಜನರು ನೇಕಾರಿಕೆಯನ್ನು ಅವಲಂಬಿಸಿದ್ದಾರೆ. ಶೇಕಡಾ ೩೦ರಷ್ಟು ಬಟ್ಟೆ ಒಂದು ಕಾಲಕ್ಕೆ ಕೈಮಗ್ಗಗಳಿಂದ ತಯಾರಾಗುತ್ತಿದ್ದು, ಪ್ರತಿ ವರ್ಷ ಹದಿನೈದುನೂರು ಕೋಟಿ ರೂಪಾಯಿ ಮೌಲ್ಯದ ಕೈಮಗ್ಗದ ಬಟ್ಟೆಗಳು ರಫ್ತಾಗುತ್ತಿದ್ದವೆಂದು ತಿಳಿದುಬರುತ್ತದೆ. [೧]

ಬಹುಶ: ಗ್ರಾಮೀಣ ಬದುಕಿಗೆ ಆಸರೆಯಾದ ನೇಕಾರಿಕೆ ಅತ್ಯಂತಪ್ರಾಚೀನ ಉದ್ಯಮೆ ಎನಿಸಿದೆ. ಮನುಷ್ಯನ ಬಹು ಮುಖ್ಯ ಬೇಡಿಕೆಗಳಲ್ಲಿ ಉಡುಪು ಅತೀ ಅವಶ್ಯ. ಅದರಲ್ಲೂ ಜಾಗತೀಕ ಕೈಗಾರಿಕಾ ಕ್ರಾಂತಿ ಆಗುವ ಮೊದಲು ಬಹುತೇಕ ದೇಶಗಳು ಕೈಮಗ್ಗ ಉದ್ಯಮಕ್ಕೆ ಆಶ್ರಯ ನೀಡಿದ್ದವು. ಜಾಗತಿಕ

ಕೈಗಾರಿಕಾ ಕ್ರಾಂತಿಯ ನಂತರ ಈ ಉದ್ಯಮಕ್ಕೆ ಬಲವಾದ ಪೆಟ್ಟು ಬಿದ್ದಿರುವುದಾಗಿ ತಿಳಿದು ಬರುತ್ತದೆ. ಒಂದರ್ಥದಲ್ಲಿ ಈ ಕ್ರಾಂತಿ ನೇಕಾರಿಕೆಯ ಸಾಂಸ್ಕೃತಿಕ ಬದುಕನ್ನು ಒಸೆದು ಹಾಕಿದಂತಾಗುತ್ತದೆ. ಮೇಲ್ನೋಟಕ್ಕೆ ನೇಕಾರಿಕೆ ನಿಂತಿರುವುದು ಕಂಡು ಬಂದರೂ ಅದರ ಜೊತೆಗೆ ಆ ಜನಾಂಗದ ಆಚರಣೆ, ನಂಬಿಕೆ, ಸಂಪ್ರದಾಯ, ಸಾಹಿತ್ಯ, ಕಲೆ ಎಲ್ಲವೂ ಮೂಲೆಗುಂಪಾಗಿರುವುದು ತಿಳಿದು ಬರುತ್ತದೆ. ಕರ್ನಾಟಕದಲ್ಲಿ ನೇಕಾರಿಕೆ ಪ್ರಾಚೀನ ಕಾಲದಿಂದ ಬೆಳೆದು ಬಂದಿದೆ. ಅದಕ್ಕೆ ಸಂಬಂಧಿಸಿದ ಉಲ್ಲೇಖಗಳು ದೊರೆಯುತ್ತವೆ. ಒಂದು ಅಂದಾಜಿನ ಪ್ರಕಾರ "೧೯೭೬ ರಲ್ಲಿ ಕರ್ನಾಟಕದಲ್ಲಿ ೧,೧೭,೮೩೪ (ಒಂದು ಲಕ್ಷದ ಹದಿನೇಳು ಸಾವಿರದ ಎಂಟು ನೂರಾ ಮೂವತ್ತನಾಲ್ಕು) ಕೈಮಗ್ಗಗಳನ್ನು ಗುರುತಿಸಲಾಗಿದೆ"[೨]

ಕರ್ನಾಟಕದಲ್ಲಿ ಬಾಗಲಕೋಟೆ ಜಿಲ್ಲೆಯು ಅತಿ ಹೆಚ್ಚು ನೇಕಾರರನ್ನು ಹೊಂದಿದೆ. ಪ್ರತಿಶತ ೪೩ರಷ್ಟು ಸೀರೆಗಳು ಈ ಭಾಗದಿಂದ ತಯಾರಾಗುತ್ತವೆ. ಬಾದಾಮಿ ಚಾಲುಕ್ಯರ ಕಾಲದಿಂದಲೂ ಈ ಪ್ರದೇಶದಲ್ಲಿ ನೇಕಾರಿಕೆ ಇತ್ತೆಂದು ಹೇಳಲಾಗುತ್ತದೆ. "ಇಳಕಲ್ಲ ಸೀರೆಯ ಉಟ್ಟು ಗುಳೇದಗುಡ್ಡದ ಬಣತೊಟ್ಟು ಹೊರಟಾಳ ನೋಡಾ ಚಲುವೆ" ಎಂಬ ನಾಣ್ಣುಡಿ ಈ ಭಾಗದಲ್ಲಿ ಜನಪ್ರೀಯವಾಗಿದೆ. ಅಮಿನಗಡ, ಕಮತಗಿ, ಇಳಕಲ್ಲ, ಸೂಳೆಬಾವಿ, ಗುಡೂರು, ರಬಕವಿ, ಬನಹಟ್ಟಿ ಮುಂತಾದ ಊರುಗಳಲ್ಲಿ ಕೈಮೊಗ್ಗದ ಸೀರೆಗಳು ತಯಾರಾಗುತ್ತಿದ್ದವು. ಇವುಗಳ ಪ್ರಾಚೀನತೆ ಕುರಿತು ನಿಖರವಾದ ದಾಖಲೆಗಳು ಲಭ್ಯವಿರುವುದಿಲ್ಲ. ಆದರೆ ೧೮೮೪ ರಲ್ಲಿ ಪ್ರಕಟವಾದ ಮುಂಬೈಗೆಝೆಟಿಯರ್‌ನಲ್ಲಿ ತಿಳಿಸಿದಂತೆ "ನೂಲಿಗೆ ಹಾಗೂ ರೇಷ್ಮೆಗೆ ಬಣ್ಣ ಹಾಕುವ ಸುಮಾರು (ನಾಲ್ಕುನೂರು) ೪೦೦ ಕುಟುಂಬಗಳು ಇದ್ದ ಬಗ್ಗೆ ಮಾಹಿತಿ ದೊರೆಯುತ್ತದೆ."[೩] ೧೯ನೇ ಶತಮಾನದ ಕೊನೆಯಲ್ಲಿ ಇಳಕಲ್ಲ ಬಣ್ಣಗಾರಿಕೆಯ ಮುಖ್ಯ ಕೇಂದ್ರವಾಗಿತ್ತು. ಇಲ್ಲಿ ತಯಾರಾಗುವ ಸೀರೆಗಳಿಗೆ ಅತಿ ಬೇಡಿಕೆ ಇದ್ದದ್ದು ತಿಳಿದು ಬರುತ್ತದೆ. ೧೯೯೯ ರಲ್ಲಿ ಇಳಕಲ್ಲಿನಲ್ಲಿ ೩,೨೦೦ (ಮೂರುಸಾವಿರದ ಎರಡುನೂರು) ಕೈಮಗ್ಗಗಳಿದ್ದವು. ೧೧,೨೮೩ (ಹನ್ನೊಂದುಸಾವಿರದ ಏರಡುನೂರಾಎಂಭತ್ತುಮೂರು) ಉದ್ಯೋಗಿಗಳು ೧೮೭ ಕೋಟಿ ರೂಪಾಯಿಗಳ ಉತ್ಪಾದನೆಯಾಗುತ್ತಿದ್ದುದು ತಿಳಿದು ಬರುತ್ತದೆ. ಅದೇನೆ ಇದ್ದರೂ ಕರ್ನಾಟಕ ಸಂಸ್ಕೃತಿ ಕಲೆಯನ್ನು ಪ್ರತಿಬಿಂಬಿಸುವ "ಇಳಕಲ್ಲ ಸೀರೆ" ಯ ಜನಪ್ರೀಯತೆ ಅಂತಾರಾಷ್ಟ್ರ ಮಟ್ಟವನ್ನು ಮುಟ್ಟಿದೆ.

ವಸ್ತ್ರ ತಯಾರಕರನ್ನು ವಸ್ತ್ರ ಶಿಲ್ಪಿ ಎಂದು ಕರೆಯುವ ರೂಢಿ. ಇನ್ನೊಂದು ಅರ್ಥದಲ್ಲಿ ವಸನಗಾರಿಕೆ ಮಾಡುವವ ಎಂತಲೂ ಹೇಳುತ್ತಾರೆ. ಪ್ರಾಚೀನ ಕರಕುಶಲ ಕಲೆಯಲ್ಲಿ ಇದು ಒಂದು. ಈ ಕಲೆ ಮರದ ಎಲೆ ತೊಗಟೆಗಳಿಂದ ಆರಂಭವಾಗಿ ಇತ್ತೀಚೆಗೆ ಕೃತಕ ನೂಲನ್ನು ಬಳಸಿಕೊಂಡು ಬೆಳೆದು ಬಂದಿದೆ.

ನೇಕಾರಿಕೆ ಚಾರಿತ್ರಿಕ ಸ್ಥಾನಮಾನ ಇದ್ದಂತೆಯೇ ಆ ವೃತ್ತಿ ಮಾಡುವವರಿಗೂ ಅದೇ ಸ್ಥಾನಮಾನ ಇದೆ. ಇವರನ್ನು ದೇವಾಂಗ ಸಮುದಾಯದವರೆಂದು ಕರೆಯುತ್ತಾರೆ. ಭಾರತಾದ್ಯಾಂತ ವ್ಯಾಪಿಸಿರುವ ಈ ಜನಾಂಗ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ತಮಿಳುನಾಡುಗಳಲ್ಲಿ ವಾಸಿಸುತ್ತಾರೆ. 'ದೇವಾಂಗ ಜನಾಂಗದಲ್ಲಿ ದೇವಾಂಗ್, ಕೋಷ್ಠೀ, ಹಟಗಾರ್, ಜೇಡ್, ವಿಂಕರ್ ಜುಲೋಹಿ, ಹಲಕಾರ್ ಎಂಬ ಜಾತಿ ಉಪಜಾತಿಗಳನ್ನೊಳಗೊಂಡಿದೆ' [೪]

ದೇವಾಂಗದವರನ್ನು ಜೇಡರ, ದೇವರ, ದೇವಾಂಗ, ಎಂದು ಕರೆಯುತ್ತಾರೆ. ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ ಮತ್ತು ಕೇರಳಗಳಲ್ಲಿ ದೇವಾಂಗದವರನ್ನು "ಶಾಲಿ" "ಶಾಲಿಯಾ" ಎಂದು ಕರೆಯುತ್ತಾರೆ. ಶಾಲಿಯಾ ಎಂಬುದು ಸಂಸ್ಕೃತದ ಶಲಕ ಪದದಿಂದ ಬಂದಿದೆ ಎಂಬುದು ಕೆಲವರ ಅಭಿಪ್ರಾಯ. ಅಲ್ಲಿ 'ಶಲಿಕ' ಎಂದರೆ ಜೇಡ ಎಂದರ್ಥ. ಈ ಜೇಡ ಎಂಬುದನ್ನು ಕನ್ನಡ ಸ್ವೀಕರಿಸಿದೆ. ಇದನ್ನೆ ಮಲೆಯಾಳಂನಲ್ಲಿ ಚಲಂದಿ, ಚಿಲಂದಿ ಎಂದು ಕರೆಯುತ್ತಾರೆ. ದೇವಾಂಗ ಜನಾಂಗವನ್ನು ಪದ್ಮಶಾಲಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಒಂದು ದಂತ ಕಥೆಯ ಪ್ರಕಾರ ಮಾರ್ಕಂಡೇಯ ಪದ್ಮಶಾಲಿ ಸಮಾಜದ ಮೂಲ ಪುರುಷನೆಂದು ನಂಬಲಾಗಿದೆ. ಇದರಲ್ಲಿಯೂ ನೂರಾರು ಉಪಪಂಗಡಗಳಿದ್ದು ಅವುಗಳ ಕೂಡುಕೊಳ್ಳುವಿಕೆಯಲ್ಲಿ ಬೇರೆ ಬೇರೆ ಪದ್ಧತಿಗಳನ್ನು ಅನುಸರಿಸುತ್ತಾರೆ.

ದೇವಾಂಗ ಸಮುದಾಯದ ಹುಟ್ಟಿನ ಬಗ್ಗೆ ಕೆಲವು ಕಥೆಗಳು, ಪುರಾಣಗಳು ಬೆಳೆದು ಬಂದಿವೆ. ದೇವಲ ಮಹರ್ಷಿ ಈ ಕುಲದ ಮೂಲಪುರುಷನಾಗಿದ್ದು, ದೇವಾಂಗ ಪುರಾಣದ ಪ್ರಕಾರ ಮೊದಲ ಮಾನವರು ಮಾನರಕ್ಷಣೆಗೆ ಎಲೆ-ತೊಗಟೆಗಳಂತಹ ಸಾಧನ ಬಳಸುತ್ತಿದ್ದರು. ಆದರೆ ಶರೀರ ರಕ್ಷಣೆಗೆ ಅಸಮರ್ಪಕವಾದ ಇವುಗಳಿಂದ ಬೇಸತ್ತ ಜನರು ಸಾಧಿಸಿದ ಪ್ರಯತ್ನ ಫಲವೇ ದೇವಾಂಗನ ಅವತಾರ. "ಒಂದು ದಿನ ದೇವಾನುದೇವತೆಗಳು ಮಾನ ಸಂರಕ್ಷಣೆ ಮಾಡಿಕೊಳ್ಳಲು ನಾಚಿಕೆಯಿಂದ ಈಶ್ವರನಲ್ಲಿ ಬೇಡಿಕೊಂಡಾಗ ಈಶ್ವರನು ಧ್ಯಾನಮಗ್ನನಾಗಿ ತನ್ನ ಸಹಸ್ರಾರು ಕಮಲದಲ್ಲಿ ಪ್ರತಿಷ್ಠಿತನಾದ ದೇವಲ ಪರಬ್ರಹ್ಮನನ್ನು ಸೃಷ್ಠಿಸಿದನು. ಆಗ ದೇವಲನು ನನ್ನನ್ನು ಸೃಷ್ಠಿಸಿದ ಕಾರಣವೇನೆಂದು ಶಿವನನ್ನು ಕೇಳಿದಾಗ ದೇವತೆಗಳ ಸಂಕಷ್ಟ ಹೀಗಿದೆ ಎಂದು ತಿಳಿಸಿದಾಗ ದೇವಲನು ಯಜ್ಞಸೂತ್ರ, ಯೋಗದಂಡ, ಕಮಂಡಲ, ಗಂಧ, ರುದ್ರಾಕ್ಷಿ ಮಾಲೆಗಳನ್ನು ಧರಿಸಿ ಪರಮೇಶ್ವರನ ಫಾಲನೇತ್ರದಿಂದ ಹೊರಬಂದನು.

ಆಗ ಪರಮೇಶ್ವರನು ದೇವಲನಿಗೆ ಹೇಳಿದನು. ನೀನು ಲೋಕೋಪಯೋಗಿ ಕಾರ್ಯಗಳನ್ನು ಮಾಡಿ ಆರು ಜನ್ಮತಾಳಿ ಕೀರ್ತಿ ಗಳಿಸಿ ಏಳನೇಯ ಜನ್ಮದಲ್ಲಿ ಮೋಕ್ಷ ಹೊಂದುವೆ. ನನ್ನಿಂದ ವೇದಗಳು ಹುಟ್ಟಿದಾಗ ಒಡಹುಟ್ಟಿದ ತಂತುಗಳು ವಿಷ್ಣುವಿನ ಹೊಕ್ಕಳದಲ್ಲಿವೆ. ನೀನು ಅಲ್ಲಿಗೆ ಹೋಗಿ ವಿಷ್ಣುವಿನಿಂದ ತಂತು ಪಡೆದು ಕುಶಲತೆಯಿಂದ ನೇಯ್ದುವಸ್ತ್ರವನ್ನು ಸಕಲರಿಗೂ ನೀಡಿ ಕಾಪಾಡು ದೇವತೆಗಳಿಗೆ ವಸ್ತ್ರಕೊಟ್ಟು, ಅವರ ಅಂಗಗಳನ್ನು ಅಲಂಕರಿಸಿ ದೇವಾಂಗನೆಂದು ಹೆಸರು ಪಡೆ.

ಭರತಖಂಡದ ಸಗರದೇಶದ ರಾಜಧಾನಿಯಾದ ಅಮೋದ ಪಟ್ಟಣದಲ್ಲಿ ರಾಜನಾಗಿ ಯಶಸ್ವಿಯಾಗು ನಿನ್ನ ವಂಶಜರು ದಾನಿಗಳು ಸತ್ಯಸಂಪನ್ನರು, ಪರೋಪಕಾರಿಗಳು, ಸದಾಚಾರಿ ದೇವ ಬ್ರಾಹ್ಮಣರು ವಿಶ್ವಾಸಿಗಳಾಗುವರು ಎಂದು ಹೇಳಿದನು. ನಂತರ ದೇವಲನು ಪಾರ್ವತಿದೇವಿಯನ್ನು ಪ್ರಾರ್ಥಿಸಿದಾಗ ಸಮಯ ಬಂದಾಗ ನೀನು ಸ್ಮರಿಸಿದರೆ ನಾನು ಸಹಾಯ ಮಾಡುತ್ತೇನೆಂದು ಆಕೆ ವಚನ ಕೊಟ್ಟಳು.

ದೇವಲನು ನೇರವಾಗಿ ಕ್ಷೀರಸಾಗರಕ್ಕೆ ಹೋಗಿ ವಿಷ್ಣುವನ್ನು ಭಕ್ತಿಯಿಂದ ಸ್ತುತಿಸಿದಾಗ ವಿಷ್ಣು ಈತನ ತಪಸ್ಸಿಗೆ ಮೆಚ್ಚಿ ನಾರಾಯಣನು ಪ್ರತ್ಯಕ್ಷನಾಗಲು ವಸ್ತ್ರಗಳನ್ನು ನಿರ್ಮಿಸಲು ವಿಷ್ಣುವಿನ ನಾಭಿ ಕಮಲದ ತಂತುಗಳು ಬೇಕೆಂದನು. ವಿಷ್ಣುವು ಅದನ್ನು ಕೊಟ್ಟು ನಿನ್ನ ಕೆಲಸದಲ್ಲಿ ಮಾಯಾವಿ ರಾಕ್ಷಸರು ವಂಚಿಸುವರು ನೀನು ಜಾಗರೂಕನಾಗಿ ಅವರನ್ನು ಜಯಿಸು ಎಂದು ತನ್ನಲ್ಲಿದ್ದ ಚಕ್ರವನ್ನು ಕೊಟ್ಟನು. ಅದನ್ನು ಪಡೆದು ದೇವಲನು ಜಂಬೂ ದ್ವೀಪಕ್ಕೆ ಬಂದು ಒಂದು ಆಶ್ರಮದಲ್ಲಿರಲು, ಅಲ್ಲಿ ಒಬ್ಬ ದೈತ್ಯನು ಕಪಟ ಋಷಿಯ ವೇಷದಿಂದ ಬಂದು ದೇವಲನು ತಂದ ತಂತುಗಳನ್ನು ಕದಿಯಲು ಕಾದಿದ್ದನು. ನಡುರಾತ್ರಿಯಲ್ಲಿ ಕಪಟಮುನಿ ಹಾಗೂ ಶಿಷ್ಯರು ದೇವಲನನ್ನು ಸದೆ ಬಡಿಯಲು ಅವರಲ್ಲಿ ಐದು ಮಂದಿ ದೈತ್ಯರು ವಿಷ್ಣುವಿನಿಂದ ವರವ ಪಡೆದ ಕಾರಣದಿಂದ ಅಜೇಯರಾದರು. ಆಗ ದೇವಲನು ಪಾರ್ವತಿಯನ್ನು ಸ್ತುತಿಸಲು ಆಕೆ ಚೌಡೇಶ್ವರಿಯ ರೂಪ ತಾಳಿ ರಾಕ್ಷಸರನ್ನು ಕೊಂದಳು. ದೇವಿಯು ತನ್ನ ಕೇಶರಾಶಿಯಿಂದ ದೈತ್ಯರನ್ನು ಅಪ್ಪಳಿಸಿದಾಗ ಆಕೆಗೆ ಚೌಡೇಶ್ವರಿ ಎಂದು ಹೆಸರು ಬಂದಿತು.

ಅಮೋದಪುರ ಪಟ್ಟಣದ ಅರಸನಾದ ದೇವಲನು ಬಟ್ಟೆಗಳನ್ನು ನೇಯಲು ಸಂಕಲ್ಪಿಸಿ. ಮಯನಿಂದ ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಪಡೆದು ಶುಭ ಮಹೂರ್ತದಲ್ಲಿ ವಸ್ತ್ರಗಳನ್ನು ನೇಯಲಾರಂಭಿಸಿದನು. ಚಿತ್ರ-ವಿಚಿತ್ರವಾದ ಬಣ್ಣ ಬಣ್ಣದ ವಸ್ತ್ರಗಳನ್ನು ದೇವಾಂಗನು ನೇಯ್ದು ಭೂದೇವಿಗೆ ರಕ್ತಾಂಬರ, ಬ್ರಹ್ಮನಿಗೆ ಕೆಂಪುದುಕೂಲ, ಸರಸ್ವತಿಗೆ ದವಳಾಂಬರ, ಸಾವಿತ್ರಿಗೆ ಹಳದಿ ವಸ್ತ್ರ, ಗಾಯತ್ರಿಗೆ ಕೆಂಪು ವಸ್ತ್ರಗಳನ್ನು ನೀಡಿದನು. ವಿಷ್ಣುವಿನ ಹೊಕ್ಕಳದಿಂದ ಹುಟ್ಟಿದ ಮಾನಿ-ಅಭಿಮಾನಿ ಎಂಬ ಸ್ತ್ರೀಯರು ಭೂಲೋಕದಲ್ಲಿ ಹತ್ತಿಯ ಗಿಡಗಳಾಗಿ ಹುಟ್ಟಿ ಆತನಿಗೆ ಹತ್ತಿಯನ್ನೊದಗಿಸಿದರು. ಆ ನಂತರ ದೇವಲ ಸಕಲರಿಗೂ ವಸ್ತ್ರಗಳನ್ನು ನೀಡಿದನು. ಪಾತಾಳಕ್ಕೆ ಹೋಗಿ ಆದಿಶೇಷನಿಗೂ ವಸ್ತ್ರಗಳನ್ನಿತ್ತು ಆತನ ಮಗಳು ಚಂದ್ರ ರೇಖೆಯನ್ನು ಸ್ವೀಕರಿಸಿದನು. ಭೈರವನಿಗೆ ವಸ್ತ್ರವನಿಟ್ಟಾಗ ಆತನು ದೇವಾಂಗನು ತನಗೆ ಕೊನೆಯ ವಸ್ತ್ರವನ್ನು ನೀಡಿದ ಎಂದು ಕೋಪದಿಂದ ಅದನ್ನು ಚೂರು ಚೂರಾಗಿ ಹರಿದು ಹಾಕಿದನು.

ಶಿವನನ್ನು ಕಾಣಲು ಕೈಲಾಸಕ್ಕೆ ಹೊಕ್ಕು ಮಹಾದೇವನನ್ನು ಸ್ತುತಿಸಿ ಆತನಿಗೆ ವಸ್ತ್ರವನ್ನು ನೀಡಿ ಬಟ್ಟೆ ನೇಯ್ದು ಉಳಿದ ದಾರಗಳನ್ನು ಏನು ಮಾಡಬೇಕೆಂದು ಕೇಳಲು ವೇದಮಾತೆಯಾದ ಗಾಯತ್ರಿಯನ್ನು ಧ್ಯಾನಿಸಿ ಉಪವೀತವನ್ನು, ಮಂಗಳ ಸೂತ್ರವನ್ನು ತಯಾರಿಸಲು ಹೇಳಿದನು. ಹಾಗೇ

ಆದರಿಂದ ಯಜ್ಞೋಪವೀತವನ್ನು ಮಂಗಳಸೂತ್ರವನ್ನು ತಯಾರಿಸಿದನು. ಸಂತುಷ್ಟನಾದ ಮಹಾದೇವನು ದೇವಾಂಗನಿಗೆ ಪರಶು ಆಯುಧವನ್ನು ಶತೃಗಳ ನಾಶಕ್ಕಾಗಿ ನಂದಿ ಧ್ವಜವನ್ನು ದಯಪಾಲಿಸಿದನು. ಶಿವನ ಅಪ್ಪಣೆಯಂತೆ ಸೂರ್ಯ ತನ್ನ ತಂಗಿ ದೇವದತ್ತೆಯನ್ನು ಆತನಿಗೆ ಕೊಟ್ಟು ವಿವಾಹ ಮಾಡಿದನು. ದೇವದತ್ತ ಮತ್ತು ಚಂದ್ರರೇಖೆಯೊಡನೆ ದೇವಾಂಗನು ರಾಜರ್ಷಿಯಂತೆ ಬಾಳಿದನು. ದೇವದತ್ತೆಯಲ್ಲಿ ಮೂರು ಮಕ್ಕಳು, ಚಂದ್ರ ರೇಖೆಯಲ್ಲಿ ಒಬ್ಬ ಮಗನು. ಆತನಿಗೆ ಒಟ್ಟು ನಾಲ್ಕು ಮಕ್ಕಳು ಹುಟ್ಟಿದ್ದರು. ದೇವತೆಗಳಿಗೆ ವಸ್ತ್ರವಿತ್ತು ತಮಗೆ ಮಾತ್ರ ದೇವಾಂಗ ವಸ್ತ್ರವನ್ನು ಕೊಟ್ಟಿಲ್ಲವೆಂದು ಕುಪಿತರಾದ ರಾಕ್ಷಸರು ಆತನಿಗೆದುರಾಗಿ ಹೋರಾಟ ಮಾಡಿದರು. ಅವರನ್ನೆಲ್ಲಾ ಆತ ಸದೆಬಡಿಯಲು ಅಲ್ಲಿಯೇ ಇದ್ದ ನಂದಿಧ್ವಜವನ್ನು ವಿದ್ಯುತ್ಕೇಶ ಎಂಬ ದೈತ್ಯನು ಅಪಹರಿಸಿ ತನ್ನ ಪಟ್ಟಣಕ್ಕೆ ದೇವಾಂಗನು ಬರುವಂತೆ ಮಾಡಿ ತನ್ನ ಮಗಳಾದ ಪದ್ಮಿನಿಯನ್ನು ವಿವಾಹ ಮಾಡಿಕೊಟ್ಟನು. ರಾಕ್ಷಸರಿಗೆ ನೇಯ್ಗೆ ಕಲಿಸಿ ದೇವಾಂಗನು ನಂದಿಧ್ವಜದೊಂದಿಗೆ ಹಿಂತಿರುಗಿದನು. ಮುಂದೆ ಅವನು ಶಿವನ ದರ್ಶನ ಪಡೆದಾಗ, ಶಿವನು ನಂದಿಧ್ವಜವನ್ನು ಅಸುರರ ಪಾಲುಮಾಡಿ ದೇವತೆಗಳನ್ನು ಬಾಧೆಪಡಿಸುವುದರಿಂದ ಏಳು ಅವತಾರಗಳನ್ನು ಭೂಮಿಯಲ್ಲಿ ಪಡೆದುಕೊಳ್ಳಬೇಕಾಗುವುದೆಂದು ಶಾಪವಿತ್ತನು. ಆಗ ದೇವಾಂಗನ ದೇಹವು ಲಿಂಗವಾಗಿ "ರಾಮಲಿಂಗೇಶ್ವರ" ಎಂದು ಹೆಸರಾಯಿತು. ಅಂದಿನಿಂದ ಇಂದಿನವರೆಗೂ ದೇವಾಂಗರು ರಾಮಲಿಂಗೇಶ್ವರನನ್ನು ಆರಾಧಿಸತೊಡಗಿದರು. ಮುಂದೆ ದೇವಾಂಗನು ವಿದ್ಯಾದರ ಪುಷ್ಪದಂತ, ಬೇತಾಳ, ವರರುಚಿ, ಚಿತ್ರಯೋಗಿ, ದೇವಶಾಲಿ, ದೇವದಾಸ ಎಂಬ ಏಳು ಅವತಾರಗಳನ್ನು ತಾಳಿದನು. ಆತನ ಕೊನೆಯ ಅವತಾರವಾದ "ದೇವದಾಸವತಾರ" ದೇವಾಂಗ ದಾಸಿಮಯ್ಯ ಎಂದು ದೇವಾಂಗರು ಹೇಳಿಕೊಳ್ಳುತ್ತಾರೆ. ಆದ್ಯವಚನಕಾರರಾದ ದೇವರದಾಸಿಮಯ್ಯ ನೇಕಾರ ಎನ್ನುವುದಕ್ಕೆ ಆತನ ವಚನಗಳೇ ಸಾಕ್ಷಿಯಾಗಿವೆ" [೫]

ಈ ಜನಾಂಗವನ್ನು ಪದ್ಮಶಾಲಿ ಎಂದು ಕರೆಯಲಾಗುತ್ತದೆ. ಇವರ ಚಾರಿತ್ರಿಕ ಸಂಗತಿಗಳನ್ನು ದೇವಾಂಗ ಪುರಾಣಕ್ಕಿಂತಲೂ ಭಿನ್ನವಾಗಿ ಮಾರ್ಕಂಡೇಯ ಪುರಾಣದಲ್ಲಿ ಹೇಳಲಾಗಿದೆ. ಬ್ರಹ್ಮ ಮಾನಸಪುತ್ರ ಭೃಗು ಮತ್ತು ಆತನ ಪತ್ನಿ ಖ್ಯಾತಿ ಹೊಂದಿದವರು. ಇವರ ಮಕ್ಕಳಾದ ದಾತ–ವಿದಾತ ಮತ್ತು ಶ್ರೀದೇವಿಯರು ಶ್ರೀಮನ್ನಾರಾಯಣನ ಮದುವೆಯಾದರು. (ಆದುದರಿಂದ ತಿರುಪತಿಯ ವೆಂಕಟರಮಣನ ಪತ್ನಿ ಲಕ್ಷ್ಮಿಯ ತವರುಮನೆಯವರು ನಾವು ಎಂದು ಪದ್ಮಶಾಲಿ ಜನಾಂಗದವರು ಹೇಳಿಕೊಳ್ಳುತ್ತಾರೆ) ವಿಧಾತನು ನಿಯಾತಿ ಎನ್ನುವ ಸ್ತ್ರೀಯನ್ನು ಮದುವೆಯಾಗುತ್ತಾನೆ. ಇವರ ಮಗ ವೃಕುಂಡು, ಇವನು ಮರುದ್ವತಿಯನ್ನು ಮದುವೆಯಾಗುತ್ತಾನೆ. ಈ ದಂಪತಿಗಳಿಗೆ ಮಕ್ಕಳಿಲ್ಲದ ಕಾರಣ ಇವರು ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದಾಗ ಶಿವನು ಇವನಿಗೆ ವರವಿತ್ತು ಅಲ್ಪಾಯುಷ್ಯವುಳ್ಳ ಮಗುವನ್ನು ಕರುಣಿಸುತ್ತಾನೆ.

ಈ ಅಲ್ಪಾಯುಷಿಯೇ ಮಾರ್ಕಂಡೇಯ. ಈತ ಅಲ್ಪಾಯುಷ್ಯಯಾಗಿದ್ದರೂ ತನ್ನ ಭಕ್ತಿಯಿಂದ ಯಮದೇವನನ್ನು ಗೆದ್ದು ಪೂರ್ಣಾಯುಷ್ಯ ಪಡೆದ ಮಾರ್ಕಂಡೇಯನು ಮಾಡಿದ ಯಜ್ಞ (ಪುತ್ರಕಾಮೇಷ್ಟ) ದ ಯಜ್ಞಕುಂಡದಿಂದ ಭಾವನಾ ಋಷಿ ಹುಟ್ಟಿದನು. (ಇವನೊಂದಿಗೆ ಪಂಚಪುಟಿ ಎಂಬುವನು ಹುಟ್ಟಿದನು) ದೇವತೆಗಳ ಕೋರಿಕೆಯಂತೆ ಭಾವನಾ ಋಷಿ ವಸ್ತ್ರನಿರ್ಮಾಣ ಮಾಡಲು ಬೇಕಾದ ತಂತುಗಳನ್ನು ಅವನಿಗೆ ನೀಡುತ್ತಾನೆ. ದೇವಾಂಗದ ಪುರಾಣದಲ್ಲಿ ಪದ್ಮನಾಭನಿಂದ ದೇವಲನು ತಂತುಗಳನ್ನು ಪಡೆದರೆ, ಇಲ್ಲಿ ಪದ್ಮನಾಭನ ಪದ್ಮದ ತಂತುಗಳಿಂದ ವಸ್ತ್ರ ನಿರ್ಮಾಣವನ್ನು ಭಾವನಾ ಋಷಿ ಮಾಡುತ್ತಾನೆ. ಈ ಕಾರಣದಿಂದ ಆತನ ವಂಶಜರು ಪದ್ಮಶಾಲಿಗಳೆಂದು ಕರೆಸಿಕೊಂಡರು. ಭಾವನಾ ಋಷಿ ತಾನು ನೇಯ್ದ ಬಟ್ಟೆಯನ್ನು ಭೈರವ (ಶಿವ) ನಿಗೂ ಅರ್ಪಿಸಿದಾಗ ಇದು ಕೊನೆಯ ಬಟ್ಟೆಯೆಂದು ತಿಳಿದು ಕೋಪಗೊಂಡ ಶಿವನು ಅದನ್ನು ತಿರಸ್ಕರಿಸಿ ಶಾಪ ಹಾಕುತ್ತಾನೆ. ನೀನು ನೇಯ್ದ ವಸ್ತ್ರಗಳು ಆರೇ ತಿಂಗಳಲ್ಲಿ ಸವೆದು ಹೋಗಲಿ ಅಥವಾ ಹರಿದು ಹೋಗಲಿ ಎಂದಾಗ ನೀನು ನೇಯ್ದಿರುವ ಈ ವಸ್ತ್ರ ನನಗೆ ಬೇಡ ನನಗೆ ನೀನು ಕೊಡುವುದಾದರೆ ವ್ಯಾಘ್ರ ಚರ್ಮವನ್ನು ಕೊಡು ಅದನ್ನೇ ನಾನು ಧರಿಸುತ್ತೇನೆ ಎಂದಾಗ ನಾರದನ ಸಲಹೆಯಂತೆ ಭಾವನಾ ಋಷಿಯು ಸೂರ್ಯಕುಮಾರಿ ಭದ್ರಾವತಿಯನ್ನು ಹಾಗೂ ಆಕೆಯ ಸಹೋದರಿಯನ್ನು ಮದುವೆಯಾಗಿ ವ್ಯಾಘ್ರಗಳನ್ನು ಪಡೆದು ವ್ಯಾಘ್ರರೂಢನಾಗಿ ಶಿವನ ಬಳಿಗೆ ಬಂದನು. ಶಿವನಡೆಗೆ ಬಂದಾಗ ವ್ಯಾಘ್ರನು ತನ್ನ ಧರ್ಮವನ್ನು ತಾನೇ ಸುಲಿದು ಶಿವನಿಗೆ ಅರ್ಪಿಸಿತು. ಮುಂದೆ ಭಾವನಾ ಋಷಿಗೆ ಸೂರ್ಯಪುತ್ರಿಯಾದ ಭದ್ರಾವತಿಯಲ್ಲಿ (ನೂರಾವೊಂದು) ೧೦೧ ಮಕ್ಕಳಾದವು. ವಿಷ್ಣುವು ತನ್ನ ನಾಭಿಕೋಶದಿಂದ ನೀಡಿದ ಹತ್ತಿ ಬೀಜಗಳಿಂದ ಉಂಟಾದ ಹತ್ತಿಯಿಂದ ಆತನ ವಂಶಜರು ವಸ್ತ್ರ ನಿರ್ಮಾಣವನ್ನು ಕೈಗೊಂಡರು. ಭಾವನಾ ಋಷಿಯು ಸೂರ್ಯಪುತ್ರಿಯಾದ ಭದ್ರಾವತಿಯನ್ನು ವಿವಾಹವಾಗಿ ಹುಟ್ಟಿದ ೧೦೧ ಮಕ್ಕಳ ವಂಶಜರೇ ಪದ್ಮಶಾಲಿವರು. ಪದ್ಮಶಾಲಿಯವರ (ನೂರಾವೊಂದು) ೧೦೧ ಅವರದೇ ಹೆಸರುಗಳಿವೆ. ಭಾವನಾ ಋಷಿಯು ಮಾನರಕ್ಷಕ, ವಸ್ತ್ರಬ್ರಹ್ಮ, ಬಹೋತ್ತಮ ಮುಂತಾದ ಬಿರುದುಗಳನ್ನು ಪಡೆದುಕೊಂಡನು. ಈ ಸಮುದಾಯದ ಪದ್ಮಾಕ್ಷ ಎಂಬುವನು ಈ ಜನಾಂಗಕ್ಕೆ ಬ್ರಹ್ಮನಿಂದ ದೊರೆತ ಅಮೂಲ್ಯವಾದ ರತ್ನದ ಗುಟ್ಟನ್ನು ಗಣಪತಿಗೆ ತಿಳಿಸಲು ನಿರಾಕರಿಸಿದ ಕಾರಣದಿಂದ ಗಣಪತಿಯು ನಿನ್ನ ಸಮಾಜವು ಅಧಃ ಪತನವನ್ನು ಹೊಂದಲಿ ಎಂದು ಶಾಪವಿತ್ತನು. ಮುಂದೆ ಇವರಲ್ಲಿ ಜನಿಸಿದ ಪರಬ್ರಹ್ಮ ಮೂರ್ತಿಯು ಅಥವಾ ಪದ್ಮಭವಾಚಾರ್ಯ ಎಂಬುವನು ಗಣಪತಿಯಿಂದ ಈ ಜನಾಂಗಕ್ಕೆ ಹೊಂದಿದ್ದ ಶಾಪವನ್ನು ಪರಿಹರಿಸಿ ಜನತೆಯನ್ನು ೮ ಪಂಗಡಗಳಾಗಿಯೂ ೯೬ ಗೋತ್ರಗಳನ್ನಾಗಿಯೂ ಮಾಡಿ ಚತುರ್ಗುರುಗಳ ಕೈಕೆಳಗೆ ಚತುರ್‌ಮಠಗಳನ್ನು ಸ್ಥಾಪಿಸಿದನು. ಹೀಗೆ ಎರಡು ಪುರಾಣಗಳನ್ನು ನೋಡಿದಾಗ ಕಂಡು ಬರುವ ಸಾಮ್ಯತೆಗಳು ಹೀಗಿವೆ.

೧. ದೇವಾಂಗ ಪುರಾಣದಲ್ಲಿ ಹಾಗೂ ಮಾರ್ಕಂಡೇಯ ಪುರಾಣದಲ್ಲಿ ದೇವಲನಿಗೆ ವಿಷ್ಣು ತನ್ನ

ನಾಭಿಕಮಲದ ತಂತು ನೀಡಿದ ನಂತರ ವಸ್ತ್ರ ನಿರ್ಮಾಣವಾಯಿತು. ಎಂದು ಹೇಳಲಾಗಿದೆ.
೨. ದೇವಾಂಗ ಹಾಗೂ ಭಾವನರು ಋಷಿಗಳೆಂದೇ ಎರಡು ಪುರಾಣಗಳಿಂದ ಗೊತ್ತಾಗುತ್ತದೆ.
೩. ದೇವಾಂಗ ಪುರಾಣದಲ್ಲಿ ದೇವಾಂಗನು ಸೂರ್ಯನ ತಂಗಿಯಾದ ದೇವದತ್ತೆಯನ್ನು ವಿವಾಹವಾದರೆ ಮಾರ್ಕಂಡೇಯ ಪುರಾಣದಲ್ಲಿ ಭಾವನಾ ಋಷಿ ಸೂರ್ಯಪುತ್ರಿಯನ್ನು ವಿವಾಹವಾದರು.

ದೇವಲ ತಯಾರಿಸಿದ ಬಟ್ಟೆಗಳನ್ನು ಶಿವನು ಸ್ವೀಕರಿಸಿದ ಎಂದು ದೇವಾಂಗ ಪುರಾಣ ಹೇಳುತ್ತದೆ. ಹಾಗೆ ಭೈರವನಿಗೆ ದೇವಾಂಗನು ವಸ್ತ್ರವನ್ನು ನೀಡುವಾಗ ಕೊನೆಯಲ್ಲಿ ನೀಡಿದ ಎನ್ನುವ ಕಾರಣದಿಂದ ಆತ ಅದನ್ನು ಹರಿದು ಹಾಕಿದ ಎಂದಿದೆ. (ದೇವಾಂಗ ಪುರಾಣದಲ್ಲಿ ಭೈರವನು ಈಶ್ವರನಲ್ಲ ಎಂದಿದೆ.) ಮಾರ್ಕಂಡೇಯ ಪುರಾಣದಲ್ಲಿ ಭಾವನಾಋಷಿ ತಯಾರಿಸಿದ ವಸ್ತ್ರವನ್ನು ಈಶ್ವರನು ಸ್ವೀಕರಿಸದೇ ತನಗೆ ಹುಲಿಚರ್ಮ ಬೇಕೆಂದು ಕೇಳಿದ ಎಂದಿದೆ. ಈ ಎರಡು ಭಿನ್ನ ಕಥೆಗಳಿಂದ ತಿಳಿದು ಬರುವುದೇನೆಂದರೆ ದೇವಾಂಗ ಪುರಾಣದ ಅನಂತರವೇ ಮಾರ್ಕಂಡೇಯ ಪುರಾಣ ನಿರ್ಮಾಣವಾಗಿದೆ. ಎಂಬುದು ಸ್ಪಷ್ಟವಾಗುತ್ತದೆ. ಈಶ್ವರನಿಗೆ ಚರ್ಮಾಂಬರಧಾರಿ ಎಂದು ಹೆಸರಿಸುವ ಕಾರಣ ಆತ ವಸ್ತ್ರವನ್ನು ಉಟ್ಟು ಎನ್ನುವ ದೇವಾಂಗಪುರಾಣದ ಆ ವಾಸ್ತವಿಕತೆಯನ್ನು ಹೋಗಲಾಡಿಸಲು ಈ ವ್ಯತ್ಯಾಸವನ್ನು ಪದ್ಮಶಾಲಿಯವರು ಮಾಡಿಕೊಂಡಿರಬಹುದು. ಹೀಗೆ ಮೂಲದಲ್ಲಿ ಒಂದೆಯಾಗಿದ್ದ ಈ ಜನಾಂಗ ತಮ್ಮ ನಡುವೆ ಉಂಟಾದ ವಿವಾದದಿಂದ ಪ್ರತ್ಯೇಕಗೊಂಡ ಮೇಲೆ ಪದ್ಮಶಾಲಿಯವರು ತಮ್ಮ ಒಂದು ಪ್ರತ್ಯೇಕತೆಯ ಉದ್ಭವದ ಕಥೆಯನ್ನು ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಈ ರೀತಿ ಹೆಣೆದಿರುವ ಸಾಧ್ಯತೆಯಿದೆ" [೫]

ಕೇರಳ ಪ್ರಾಂತದಲ್ಲಿ ಶಾಲಿಯರು ತಮ್ಮ ಉತ್ಪತ್ತಿಯ ಬಗ್ಗೆ ಹೇಳುವಾಗ ಶಲ್ಯಪುರಾಣವನ್ನು ಪ್ರತಿಪಾದಿಸುತ್ತಾರೆ. ಆ ಪುರಾಣದ ಪ್ರಕಾರ "ಶಲ್ಯಮಹರ್ಶಿ"ಯು ಶಿವನ ಭಕ್ತನಾಗಿದ್ದನು. ಯಾವ ಸಮಯದಲ್ಲಾದರೂ ಶಿವನನ್ನು ಕಾಣುವ ಸಾಮರ್ಥ್ಯ ಅವನಿಗಿತ್ತು. ಸಂತತಿಯಿಲ್ಲದ ಆತನಿಗೆ ಮುಪ್ಪು ಆವರಿಸಿತು. "ಅಪುತ್ರಸ್ಯಗತಿರ್ನಾ ಸ್ತ್ರೀ" ಎನ್ನುವ ಕಾರಣದಿಂದ ತನಗೆ ಮೋಕ್ಷ ದೊರಕಿಸಿಕೊಡುವ ಮಗನಾಗಿ ಅವನು ಈಶ್ವರನನ್ನು ಕುರಿತು ಧ್ಯಾನಿಸಿದ ಆಗ ಅವನ ಮುಂದೆ ಪ್ರತ್ಯಕ್ಷನಾದ ಶಿವನ ಬಲದ ಕೈಯಲ್ಲಿ ಪುರುಷನೂ, ಎಡಗೈಯಲ್ಲಿ ಸ್ತ್ರೀಯು ಇದ್ದರು.ಅವರಿಬ್ಬರನ್ನೂ ಈಶ್ವರನೂ ಶಲ್ಯ ಮಹರ್ಷಿಗೆ ನೀಡಿದನು. ಈಶ್ವರನ ಬಲಭಾಗದ ಪುರುಷನ ವಂಶದವರು ಬಲಂಗರಾದರು. ಎಡಭಾಗದ ಸ್ತ್ರೀ ವಂಶಜರು ಎಡಂಗರಾದರು. ಬಲಂಗರ ಆರಾಧ್ಯದೈವ ಈಶ್ವರನ ಬಲಭಾಗದಲ್ಲಿ ತೊಡೆಯ ಮೇಲಿರುವ ಗಣಪತಿಯಾದರೆ, ಈಶ್ವರನ ಎಡಭಾಗದ ಎಡಂಗರ ಆರಾಧ್ಯ ದೈವವಾದಳು. ಬಲಂಗರಿಗೆ ಗುರುವಾಗಿ ಈಶ್ವರನು ಮಾರ್ಕಂಡೇಯನನ್ನು ನೇಮಿಸಿದನು. ಹಾಗೆ ಅವರು ಮಾರ್ಕಂಡೇಯನ ಶಿಷ್ಯರೆನಿಸಿದರು. ಎಡಂಗರು ಶಕ್ತಿ ಆರಾಧಕರಾದರು. ಆದಕಾರಣ ದೈವಗಳು ಪೋರಕೈಳಿಯೊ ಇವರಿಗೆ ಸಾಮಾನ್ಯ. ಈ

ಎರಡು ವಿಭಾಗಗಳಲ್ಲಿ ಕ್ಷೇತ್ರಕಾರ್ಯಗಳನ್ನು ಮಾಡಲಿರುವ ಅಧಿಕಾರವನ್ನು ಮಾರ್ಕಂಡೇಯ ಮುನಿ ನೀಡಿದನು ಎಂದು ಹೇಳುತ್ತಾರೆ. ತಮಿಳುನಾಡಿನ ನೇಕಾರರ ಇನ್ನೊಂದು ಪಂಗಡವಾದ ಕೈಕೊಳನರು (ನೇಕಾರರು) ತಮ್ಮ ಮೂಲದ ಬಗ್ಗೆ ಹೀಗೆ ಹೇಳುತ್ತಾರೆ.[೭]

ಒಮ್ಮೆ ಶಿವನು ಭೂಮಿಯನ್ನು ಆಕ್ರಮಿಸುತ್ತಿರುವ ರಾಕ್ಷಸರ ಮೇಲೆ ಕೋಪಗೊಂಡು ತನ್ನ ಕಣ್ಣುಗಳಿಂದ ಐದು ಕೋಪದ ಕಿಡಿಗಳನ್ನು ಸುರಿಸಿದನು. ಭೀತಳಾದ ಪಾರ್ವತಿಯು ತನ್ನ ಕಾಲ್ಗೆಜ್ಜೆಗಳಿಂದ ಒಂಭತ್ತು ಮಣಿಗಳನ್ನು ಉದುರಿಸಿದಳು. ಶಿವನೇ ಇವುಗಳನ್ನು ಒಂಭತ್ತು ಹೆಂಗಸರನ್ನಾಗಿ ಬದಲಾಯಿಸಿ ಅವರಿಗೆ ಕೈಯಲ್ಲಿ ಈಟಿ ಹಿಡಿದಿರುವ ಮಕ್ಕಳು ಜನಿಸುವಂತೆ ಮಾಡಿದನು. ಇವರ ನಾಯಕನನ್ನಾಗಿ ಸುಬ್ರಹ್ಮಣ್ಯಸ್ವಾಮಿಯನ್ನು ನೇಮಿಸಿ ರಾಕ್ಷಸರ ಸಂಹಾರ ಮಾಡಿದನು. ಈ ಒಂಭತ್ತು ವೀರರಲ್ಲಿ ಓರ್ವನಾದ ವೀರಬಾಹುವಿನ ವಂಶಸ್ಥರು ಚೆಂಗುಂದವರ್ ಅಥವಾ ಕೈಕೋಳನರೆಂದು ಹೇಳಲಾಗುತ್ತದೆ.

ಈ ಬಗ್ಗೆ ಇನ್ನೊಂದು ಐತಿಹ್ಯ ಈ ರೀತಿ ಇದೆ. ಪದ್ಮಾಸುರನನ್ನು ನಾಶಪಡಿಸಲು ಶಿವನು ಸುಬ್ರಹ್ಮಣ್ಯಗೆ ಆಜ್ಞಾಪಿಸಲು ಪಾರ್ವತಿಯು ಅವನೋರ್ವನನ್ನು ಕಳಿಸಬಾರದೆಂದು ಬೇಡಿಕೊಂಡಳು. ಅದಕ್ಕಾಗಿ ಶಿವನು ತನ್ನ ಕಣ್ಣುಗಳಿಂದ ಐದು ಕೋಪದ ಕಿಡಿಗಳನ್ನು ಹೊರಸೂಚಿಸಿದನು. ಪಾರ್ವತಿಯ ಗೆಜ್ಜೆಗಳಿಂದ ಹುಟ್ಟಿದಂತಹ ಹೆಂಗಸರಿಗೆ ಅವನಿಂದ ಮಕ್ಕಳಾಗಬಾರದು ಎಂಬ ಪಾರ್ವತಿಯ ಶಾಪವನ್ನು ಹಿಂತೆಗೆಯುವಂತೆ ಶಿವನು ಸೂಚಿಸಿದನು. ಅದರಂತೆಯೇ ಈ ಒಂಭತ್ತು ಹೆಂಗಸರು ಏಳು ವೀರರಿಗೆ ಜನ್ಮವಿತ್ತರು. ಕೈಯಲ್ಲಿ ಕೆಂಪು ಈಟಿಗಳೊಂದಿಗೆ ಅವರು ಹುಟ್ಟಿದರು. ಸುಬ್ರಹ್ಮಣ್ಯನು ತನ್ನ ಕೈಯಲ್ಲಿ ಕೆಂಪು ಈಟಿಯನ್ನು ಹಿಡಿದು ಇವರ ನಾಯಕನಾಗಿ ಮುಂದುವರೆದು ಪದ್ಮಾಸುರನನ್ನು ಸೋಲಿಸಿದನು. ಕೈಯಲ್ಲಿ ಈಟಿ ಹಿಡಿದ ಇವರ ವಂಶಜರನ್ನು ಕೈಕೊಳನ್ ಎಂದೇ ಗುರುತಿಸಲಾಯಿತು.

ಥರ್ಸ್ಟನ್ ತನ್ನ ಹೇಳಿಕೆಯಲ್ಲಿ ಕೊಂಚ ವ್ಯತ್ಯಾಸವಾಗಿ ಕೈಕೊಳನ್ ಎಂಬ ಪದವು ಸಂಸ್ಕೃತದ ವೀರಬಾಹು ಎಂಬ ಪದಕ್ಕೆ ಸಮಾನವಾದುದು ಅದರಿಂದಲೇ ಕೈಕೊಳನ್ ಪದವು ಹುಟ್ಟಿಕೊಂಡಿತು. ಎನ್ನುತ್ತಾರೆ [೮] ರುದ್ರಭಾರತ, ವೇದ, ಬ್ರಹ್ಮಾಂಡಪುರಾಣ ಇತ್ಯಾದಿ ಕೃತಿಗಳಲ್ಲಿ ಈ ಸಮುದಾಯದ ಉಗಮ ಬೆಳವಣಿಗೆ ಹೀಗೆ ನಿರೂಪಿತವಾಗಿದೆ.

೧. ರುದ್ರಭಾರತವೆಂಬ ಬ್ರಹ್ಮಾಂಡ ಪುರಾಣದ ಪುಟಸಂಖ್ಯೆ ೪೩ ರಲ್ಲಿ ಆದಿರುದ್ರನ ನಾಭಿಯಲ್ಲಿ ದೇವಾಂಗವೆಂಬ ವಸ್ತ್ರಾಕಾರ ಹುಟ್ಟಿದನು ಎಂದು ಹೇಳಲಾಗಿದೆ.
೨. ಋಗ್ವೇದದಲ್ಲಿ ವಸ್ತ್ರ, ತಂತು ಎಂಬ ಪದಗಳನ್ನು ಅಲ್ಲಲ್ಲಿ ಕಂಡುಬರುತ್ತವೆ.

೩. ಋಗ್ವೇದದ ಭಾಗ-೧೭ ಪುಟಸಂಖ್ಯೆ ೫೯೩ರಲ್ಲಿ "ಯಜ್ಞೋವಿಶ್ವತಸ್ತ್ರಂತುಭಿಸ್ರತ ಏಕಶತಂ" ಎಂದು ಯಜ್ಞವನ್ನು ತಂತುವಿಗೆ ಹೋಲಿಸಲಾಗಿದೆ.

೪. ಋಗ್ವೇದದ ೨೭ನೇ ಭಾಗದ ೨೧೨ ನೇ ಪುಟದಲ್ಲಿ ಯಜ್ಞವನ್ನು ವರ್ಣಿಸುವಾಗ ಹಾಸುಹೊಕ್ಕು ರೂಪದಿಂದ ತಂತುವಿನೊಂದಿಗೆ ತಂತುವನ್ನು ಸೇರಿಸಿ ಪಟ(ಬಟ್ಟೆ)ಯನ್ನು ನಿರ್ಮಿಸುವಂತೆ ಯಜ್ಞವು ವಿಶ್ವಕ್ಕೆಲ್ಲಾ ಒಂದೇ ಸಂಬಂಧ ರೂಪವಾದ ಶಕ್ತಿ ಉತ್ಪಾದನೆ ಮಾಡಿದೆ ಎಂದು ಯಜ್ಞಕ್ಕೂ ಬಟ್ಟೆಗೂ ಸಂಬಂಧವನ್ನು ಕಲ್ಪಿಸಲಾಗಿದೆ. (ಹೇಮಕೂಟ ೧೯೯೮)

೫. ನೇಯ್ಗೆಯವರ ಮಗ್ಗದಲ್ಲಿ ಲಾಳಿಯು ಅತ್ತಿತ್ತ ಓಡಾಡುವುದನ್ನು ರಾತ್ರಿ ಕತ್ತಲೆ ಹರಡುವುದಕ್ಕೂ, ಹಗಲು ಬೆಳಕು ವ್ಯಾಪಿಸುವುದಕ್ಕೂ ವೇದಗಳಲ್ಲಿ ಸಂಕೇತಿಸಲಾಗಿದೆ. (ಪದ್ಮಶಾಲಿಯ ೧೯೯೭)

೬. ಶಾಲಿಯಾ ಸಮುದಾಯದ ಉತ್ಪತ್ತಿಯ ಬಗ್ಗೆ ಆಂಧ್ರದಲ್ಲಿ ಪಾರಿಜಾತಮು ಎನ್ನುವ ಗ್ರಂಥದಲ್ಲಿ ಕುಂಬಾರ ತರುಣಿಗ ಕೆಂಸಲ ಪುರುಷನಿಂದ ಹುಟ್ಟಿದವನು. ಶಾಲಿಯಾ ಎಂದೂ ಅವನ ವಂಶಜರು ಶಾಲಿಯರೆಂದು ಕರೆಯಲ್ಪಡುತ್ತಾರೆ. ಎಂದು ಹೇಳಲಾಗಿದೆ.(ಪದ್ಮಶಾಲಿಯಾ ೧೯೯೭)

ಈ ಮೇಲಿನ ಪೌರಾಣಿಕ ಮತ್ತು ಜನವದಂತಿ ನಂಬಿಕೆಗಳ ಹಿನ್ನೆಲೆಯಲ್ಲಿ ನೇಕಾರ ಜನಾಂಗದ ಕುರಿತು ಎಲ್ಲಾ ಸಮುದಾಯಗಳಂತೆ ಈ ಜನಾಂಗದ ಉಗಮವನ್ನು ಪುರಾಣ ಮೂಲವಾಗಿ ಉಲ್ಲೇಖಿಸುತ್ತಾರೆ. ಈ ಜನಾಂಗದ ಆರಾಧ್ಯ ಗುರು ದೇವಾಂಗ ಮುನಿಯು. ಚರಿತ್ರೆಯನ್ನು ನಿರೂಪಿಸುವ "ದೇವಾಂಗ ಪ್ರಕಾಶ",ವೆಂಬ ಕೃತಿ ಕ್ರಿ.ಶ. ೧೮೦೦ ರಲ್ಲಿ ಮುದ್ದುಸಂಗಮಮುನಿಯಿಂದ ಷಟ್ಪದಿ ಪ್ರಕಾರದಲ್ಲಿ ರಚನೆಯಾಗಿದೆ. ಪ್ರಾಯಶಃ ಈ ದೇವಾಂಗ ಪ್ರಕಾಶ ಎನ್ನುವುದು ಬ್ರಹ್ಮಾಂಡ ಪುರಾಣದ ಒಂದು ಭಾಗವಾಗಿರಬೇಕೆಂದು ಇಲ್ಲವೇ ಬ್ರಹ್ಮಾಂಡ ಪುರಾಣಕ್ಕೆ ಪರ್ಯಾಯ ನಾಮವಾಗಿರಬೇಕು. ಈ ಅಭಿಪ್ರಾಯಕ್ಕೆ ಮೂಲ ಕಾರಣ ದೇವಾಂಗ ಪ್ರಕಾಶನದ ಕೊನೆಯಲ್ಲಿ ಪ್ರತಿಕಾರ "ಶ್ರೀನಾಗಮಂಗಲದ ಗಿಡ್ಡಯ್ಯಶೆಟ್ಟರ ಮಗ ವೆಂಕಟರಮಣ.ಬ್ರಹ್ಮಾಂಡ ಪುರಾಣ ಗುರುವೇಗತಿ" [೬] ಎಂಬ ಮಾತು ಗಮನಾರ್ಹವಾಗಿದೆ.

## ೩.೨ ನೇಕಾರರ ಐತಿಹಾಸಿಕ ಹಿನ್ನೆಲೆ

ಈ ಜನಾಂಗ ಕುರಿತು ಪೌರಾಣಿಕ ಹೇಳಿಕೆಗಳಂತೆ ಐತಿಹಾಸಿಕ ಸಂಗತಿಗಳು ಪ್ರಚಲಿತದಲ್ಲಿವೆ. ಈ ಹಿನ್ನೆಲೆಯಲ್ಲಿ ಈ ಜನಾಂಗ ಹಲವಾರು ಕಾರಣಗಳಿಂದ ಅಂದರೆ ಪ್ರಕೃತಿಯ ವಿಕೋಪದಿಂದಲೋ ದುಡಿಮೆಯ ಅವಶ್ಯಕತೆಯಿಂದಲೂ ವಲಸೆ ಹೋಗಿ ನೆಲೆಸುತ್ತಿದ್ದ ಸಂಗತಿಗಳು ತಿಳಿದು ಬರುತ್ತವೆ. ಶಲ್ಯ ಅಥವಾ ಶೂಲ ಎಂಬುದು ಶಾಲಿಯ ಎಂಬ ಶಬ್ಧದ ಮೂಲ ಎಂಬ ಅರ್ಥದಲ್ಲಿ ಇವರು ಶೂಲ

ಹಿಡಿದು ಯುದ್ಧದಲ್ಲಿ ಭಾಗವಹಿಸುತ್ತಿದ್ದರು ಎಂಬ ಸಮರ್ಥನೆಯನ್ನು ಕೆಲವು ವಿದ್ವಾಂಸರು ಕೊಡುತ್ತಾರೆ. ಹಾಗೆಯೆ ಕೈಯಲ್ಲಿ ಕೋಲು ಹಿಡಿದು ಯುದ್ಧ ನಿರತರಾದ ಇವರನ್ನು ತಮಿಳು ಪ್ರದೇಶದಲ್ಲಿ ಕೈಕೊಲರ್ ಎಂದು ಸಂಭೋಧಿಸಲಾಗಿದೆ. ಹಾಗೆಯೇ ಕರ್ನಾಟಕದ ಅನೇಕ ಶಾಸನಗಳಲ್ಲಿ ಮಗ್ಗದೆರೆ, ಮಗ್ಗದ ಸುಂಕ ಇತ್ಯಾದಿ ಉಲ್ಲೇಖಗಳನ್ನು ಗಮನಿಸಿದರೆ ಬೇರೆ ಬೇರೆ ಸಮುದಾಯಗಳು ವೃತ್ತಿಪರ ತೆರಿಗೆಯನ್ನು ನೀಡಿದಂತೆ ಇವರು ತಮ್ಮ ನೇಯ್ಗೆಯ ಸುಂಕವನ್ನು ತೆರುತ್ತಿರುವುದು ಕಂಡುಬರುತ್ತದೆ. ಮೂಡಬಿದರೆಯ ಹೊಸ ಬಸ್ತಿಯ ಶಾಸನವೊಂದು ಹಲವಾರು ಜಾತಿಗಳ ಬಗ್ಗೆ ಹೇಳುತ್ತಾ ನೇಕಾರ ಜನಾಂಗವನ್ನು ಸಾಲಿಗ ಜನಾಂಗವೆಂದು ಉಲ್ಲೇಖಿಸುತ್ತದೆ. ಇದನ್ನೇ ಬಸವಣ್ಣನವರು ತಮ್ಮ ವಚನದಲ್ಲಿ

ಕಾಸಿ ಕಮ್ಮಾರನಾದ
ಬೀಸಿ ಮಡಿವಾಳನಾದ
ಹಾಸನಿಕ್ಕೆ ಸಾಲಿಗನಾದ

ಎನ್ನುವಲ್ಲಿ ಇಲ್ಲಿ ಹಾಸು-ಹೊಕ್ಕು ಎಂಬ ಪದಗಳು ನೇಯ್ಗೆ ಕಾಯಕದಿಂದ ಬಳಕೆಗೆ ಬಂದವೆಂಬುದು ತಿಳಿದು ಬರುತ್ತದೆ. "ಹಾಸು" ಎಂದರೆ ಮಗ್ಗದಲ್ಲಿ ಉದ್ದಕ್ಕೆ ಹಾಕಿಕೊಂಡಿರುವ ಎಳೆಗಳು. "ಹೊಕ್ಕು" ಎಂದರೆ ಉದ್ದ ಎಳೆಗಳ ನಡುವೆ ಅಡ್ಡಹಾಯುವ ಎಳೆಗಳು. ಇವೆರಡು ಸೇರಿ ಬಟ್ಟೆಯಾಗುತ್ತದೆ. ಅದೇನೆ ಇದ್ದರೂ ಹಾಸಹೊಕ್ಕುವ ವೃತ್ತಿಗೆ ಸಂಬಂಧಿಸಿದ ನೇಕಾರರನ್ನು ಸಾಲಿಗರು ಎಂದು ಕರೆಯಲಾಗಿದೆ. ಹಾಗೆಯೇ ಕನ್ನಡದ ಜೇಡರು, ತಮಿಳಿನ ಮರವರು, ಮಹಾರಾಷ್ಟ್ರ-ಮಧ್ಯಪ್ರದೇಶದ ದೇವಾಂಗ ಮುಂತಾದ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವ ಇವರಿಗೆ ಐತಿಹಾಸಿಕ ಹಿನ್ನಲೆಯಿರುವುದು ಕಂಡು ಬರುತ್ತದೆ.

"ನೇಪಾಳದ ಅರಸರ ಧ್ವಜ ಲಾಂಛನವು ನಂದಿಯಾದುದರಿಂದ ಅವರ ಪೂರ್ವಜರು ದೇವಾಂಗದವರು ಎಂದು ಊಹೆ. ಕಚ್ ಜಸಲ್ಮೇರ್, ಚೊಚಾನಾಗಪುರ, ಕಕಾಲಿ ಮುಂತಾದ ರಾಜ್ಯಗಳ ರಾಜರೂ ದೇವಾಂಗದವರಾಗಿದ್ದರು. ಎಂದು ಉಹಿಸುತ್ತಾರೆ. ಒಂದು ಕಾಲದಲ್ಲಿ ನಾಸಿಕ್ ಪ್ರದೇಶದ ಪ್ರಾಂತಕ್ಕೆ ದೇವಾಂಗ ರಾಷ್ಟ್ರವೆಂದೂ ಅಲ್ಲಿಯ ತ್ಯಂಭಕೇಶ್ವರನಿಗೆ 'ಹಾಟಕೇಶ್ವರ' ಎಂದೂ ಸಂಭೋಧಿಸುತ್ತಿದ್ದರು. ತ್ಯಂಭಕೇಶ್ವರ ದೇವಾಲಯದ ಪಕ್ಕದಲ್ಲಿ ವೇದಮಾತೆ, ಶ್ರೀಗಾಯತ್ರಿ ಮಂದಿರವಿರುವುದು ವಿಶೇಷ. ಹಿಂದಿನ ಕಾಲದಲ್ಲಿ ಈ ಪ್ರಾಂತದಲ್ಲಿ ದೇವಾಂಗದವರು ಅಪಾರ ಸಂಖ್ಯೆಯಲ್ಲಿ ವಾಸಿಸುತ್ತಿದ್ದು, ಈಗಲೂ ಅಲ್ಲಿ ದೇವಾಂಗದವರು ಇದ್ದಾರೆ.

ನಾಸಿಕ್, ಯವಲಾ ಹಾಗೂ ಪೈಟಾನ್ ನಗರಗಳಲ್ಲಿ ಜಗತ್ ಪ್ರಸಿದ್ಧಿ ಪಡೆದ ನವಿರಾದ ಕಲಾಕುಸುರಿ ಬೆಲೆಯುಳ್ಳ ರೇಷ್ಮೇ ಸೀರೆಯನ್ನು ತಯಾರಿಸುತ್ತಿದ್ದರು. ಇಂದಿಗೂ ಅದು ಹಾಗೆ ಉಳಿದು ಬೆಳೆದು ಬಂದಿದೆ. ನಾಸಿಕ್ ಬಾನ್ ಪ್ರದೇಶದಲ್ಲಿ ಈಗಲೂ ಕಾನಡ ಕನ್ನಡರೆಂದು ಕರೆಸಿಕೊಳ್ಳುವ ಹಟ್ಟಿಕಾರರು-ದೇವಾಂಗರು ಇದ್ದಾರೆ. ಈ ವಿಷಯವನ್ನು ನಾಸಿಕ್ ಗೆಜೆಟ್ ಪುಟ ೨೩೧ರಲ್ಲಿ ನಮೂದಿಸಲಾಗಿದೆ. ದೇಶದಾದ್ಯಾಂತ ಪ್ರಬಲರಾಗಿ ಮೆರೆದ ಈ ಜನಾಂಗ ಈಜಿಪ್ಟ್, ಗ್ರೀಕ್ ಮುಂತಾದ ದೇಶಗಳಲ್ಲಿ ಕಂಡು ಬರುತ್ತಾರೆ. ವಿದೇಶ ಸಂಶೋಧಕ ಎಚ್. ಫ್ರಾಂಕ್‌ಫೋರ್ಟ್ ಅವರ ಅಭಿಪ್ರಾಯದಂತೆ ಪ್ರಾಚೀನ ಈಜಿಪ್ಟ್‌ನಲ್ಲಿ ವೃಷಭಧ್ವಜವು ಇದ್ದು ಪೂರ್ವಪ್ರದೇಶದಿಂದ ಬಂದಿದ್ದು ಕರ್ಣಇನಸ್ಟಿಟ್ಯೂಟ್ ಲೇಡನ್ ಹಾಲೆಂಡ್ ಇವರ ಎರಡನೇ ಸಂಪುಟದಲ್ಲಿ ಪುಟಸಂಖ್ಯೆ ಹತ್ತರಲ್ಲಿ ತಿಳಿಸಿದ್ದಾರೆ. ನೇಕಾರರು ಪೂರ್ವ ಸಮುದ್ರದಿಂದ, ಪಶ್ಚಿಮ ಸಮುದ್ರದವರೆಗೆ ವ್ಯಾಪಿಸಿದ್ದರೆಂದು ಪ್ರಾಚೀನ ತಮಿಳು ಕಾವ್ಯದಲ್ಲಿ ವರ್ಣಿಸಲ್ಪಟ್ಟಿದೆ." [೧೦] ಖ್ಯಾತ ಸಂಶೋಧಕ ಶಂಬಾ ಜೋಶಿಯವರು ದೇವಾಂಗದವರನ್ನು ದ್ರಾವಿಡ ಮೂಲದಿಂದ ಗುರುತಿಸುತ್ತಾರೆ. ಹಾಗೆಯೇ ಕ್ರಿ.ಶ.ಪೂ ೬ನೇ ಶತಮಾನದಲ್ಲಿಯೇ ಅಗತ್ಯ ವಸ್ತುಗಳಂತೆ ಅತಿ ನಯವಾದ ಬಟ್ಟೆಗಳು ದೇಶಾದ್ಯಾಂತ ಪ್ರಚಲಿತದಲ್ಲಿದ್ದ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ.

ಗ್ರೀಕ್ ರಾಯಬಾರಿ ಟಾಲೆಮಿ ತನ್ನ ಗ್ರಂಥದಲ್ಲಿ ಶಾಲಿಕ ಎಂಬ ದ್ವೀಪ ಲಂಕೆಯಲ್ಲಿದ್ದ ಬಗ್ಗೆ ಉಲ್ಲೇಖಿಸುತ್ತಾನೆ. ಹಾಗೆಯೇ ಮಧ್ಯಕಾಲೀನ ಭಾರತೀಯ ವಾಣಿಜ್ಯ ಸಂಘಟನೆಗಳು ತಾವು ಉತ್ಪಾದಿಸಿದ ಬಟ್ಟೆಗಳನ್ನು ಮಾರಾಟಮಾಡುವ ವ್ಯವಸ್ಥೆಯನ್ನು ತಿಳಿಸುತ್ತವೆ. ಕ್ರಿ.ಶ. ೧೧೩೩ರಿಂದ ೧೧೪೫ ರವರೆಗೆ ಬದುಕಿದ್ದ ಶಕ್ಕಿಳಾರ್ ಕವಿಯ "ಪೆರಿಯ ಪುರಾಣದಲ್ಲಿ" ಬರುವ ೬೩ ನಯಾನ್ಮಾರರಲ್ಲಿ 'ನೇಶ್‌ನಯನಾರ್' ಎನ್ನುವನು ನೇಕಾರನಾಗಿದ್ದ ಬಗ್ಗೆ ತಿಳಿದು ಬರುತದೆ. ಹರಿಹರನ ನೇಶ್‌ನಯಾನರ್ ರಗಳೆಯು ಈತನನ್ನು ಕುರಿತು

ಘನಜೇಡುಕುಲಮಾಗಿ ಚಂದ್ರಮಂ ತಾನಾಗಿ
ವಿನಯದಿಂ ನೇಶಾರೇನಿಪ್ಪಾಖ್ಯಯುತನಾಗಿ

ಎಂತಲೂ ಮತ್ತು

ಸೀರೆಗಳನುರೆ ನೆಯ್ದು ಬೇಗದಿಂದೀವ್ರತಂ
ಚಾರುವಸ್ತ್ರಂಗಳ ಭಕ್ತಿಯಿಂದಿವ್ರತಂ
ಕೌಪೀನ ಕಂಥೆಗಳನಲ್ಲಿ ಜಂಗಮಕಿತ್ತು
ಸೋಪಾಧಿ ಗುಣಮಿಲ್ಲದೆಲ್ಲಮಂ ತಾನಿತ್ತು
ಸತಿಯುಟ್ಟುದುಂ ತಾನು ಮುಟ್ಟುದಲ್ಲದೆ ಮತ್ತೆ
ಮತಿ ಮಿಗಲ್ಕೇನುವುಂ ಕೊಡಲಿಲ್ಲದಿರೆ ಮತ್ತೆ
ಸೀರೆಯಂ ನೇಯಲ್ಕೆ ತೊಡಗುತಿರಲೀಶ್ವರಂ [೧೧]

ಹರಿಹರನ ಈ ಉಲ್ಲೇಖವನ್ನು ಬಿಟ್ಟರೆ ಕ್ರಿ.ಶ.೯೪೦ ರಿಂದ ೧೦೪೦ರಲ್ಲಿ ಜೀವಿಸಿದ್ದ ಆದ್ಯ ವಚನಕಾರ ಜೇಡರ ದಾಸಿಮಯ್ಯ ಈ ಜನಾಂಗದ ಐತಿಹಾಸಿಕ ವ್ಯಕ್ತಿ. ಎಂಬುದು ತಿಳಿದು ಬರುತ್ತದೆ. ಈ ಹೊತ್ತು ಪ್ರಚಲಿತದಲ್ಲಿರುವ ಕಂಚಿ, ಮತ್ತು ಧರ್ಮಾವರಂ ಸೀರೆಗಳು ಜನಪ್ರಿಯಗೊಂಡಿರುವುದನ್ನು ನೋಡಿದರೆ ನೇಶನಾಯನ್ಮಾರರ ಭೌಗೋಳಿಕ ನೆಲೆ ಸ್ಪಷ್ಟವಾಗಿ ಗೋಚರಿಸುತ್ತದೆ. ಹೀಗೆ ದೇವಾಂಗ ಜನಾಂಗದ ಐತಿಹಾಸಿಕ ಸಂಗತಿಗಳು ಪ್ರಾಚೀನ ಕರ್ನಾಟಕ ಮತ್ತು ಕರ್ನಾಟಕೇತರ ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿರುವುದು ತಿಳಿದು ಬರುತ್ತದೆ.

## ೩.೩ ಇಳಕಲ್ಲಿನ ನೇಕಾರ ಜನಾಂಗ

ಇಳಕಲ್ಲು ನೇಕಾರ ಜನಾಂಗದ ಆವಾಸಸ್ಥಾನ. ಇಲ್ಲಿಯ ನೇಕಾರರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ವ್ಯಾಪಾರೀ ಬದುಕನ್ನು ಗಮನಿಸಿದರೆ ಅಷ್ಟೇನು ಸುಖಕರವಾಗಿ ಕಾಣಿಸುವುದಿಲ್ಲ .ಈ ಅಂಶವಾಗಿ ಅಲ್ಲಿಯ ಶ್ರೀ ಗಜಾನನ ಟೆಕ್ಸ್ ಟೈಲ್ಸ್ ಶಿವರಾಮಪ್ಪ ಸಪ್ಪರದ ಬಿ.ಕೆ.ಗುಳೇದ ಮುಂತಾದ ಉದ್ದಿಮೆದಾರರು ಹೇಳುವ ಮಾತುಗಳು ಹೀಗಿವೆ. "ವಂಶಪಾರಂಪರ್ಯವಾಗಿ ಬಂದಿರುವ ನೇಕಾರಿಕೆ ವೃತ್ತಿ ಹೆಚ್ಚಿನ ಲಾಭವನ್ನೇನು ತಂದು ಕೊಡುತ್ತಿಲ್ಲ, ಆದರೂ ಮೊದಲಿನಿಂದಲೂ ಅವಲಂಬಿಸಿಕೊಂಡಿರುವ ಈ ವೃತ್ತಿಯನ್ನು ಬಿಡಲಾಗದೆ ಮಾಡುತ್ತೇವೆ" ಎಂದಿದ್ದಾರೆ.

ಇನ್ನೊಬ್ಬ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಶ್ರೀಸೀತಾರಾಂ ಪಂಪಣ್ಣ ಸರೋದ್ ಅವರು "ಎಪ್ಪತ್ತು ವರ್ಷಗಳಿಂದ ಈ ವೃತ್ತಿಯನ್ನು ಮಾಡುತ್ತಾ ಬಂದಿದ್ದು, ಮೊದಮೊದಲು ಕೈಮಗ್ಗಗಳಿಂದ ಹಿಡಿದು ಈಗ ಯಂತ್ರ ಮಗ್ಗಗಳನ್ನು ಬಳಸಿ ಈ ವೃತ್ತಿಯಲ್ಲಿ ತೀವ್ರತೆಯನ್ನು ತಂದುಕೊಂಡಿದ್ದಾರೆ. ಅದರಿಂದ ಬರುವ ವರಮಾನ ಹೆಚ್ಚಿನದಾಗಿ ಇರುವುದಿಲ್ಲ" ಎಂದು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯದ ಸತ್ಯಾಸತ್ಯತೆಯನ್ನು ಗಮನಿಸಿದರೆ ಒಂದು ಉದ್ದಿಮೆಯನ್ನು ಸ್ಥಾಪನೆ ಮಾಡಿದ ಮಾಲೀಕ ತಾನು ಹಾಕಿದ ಬಂಡವಾಳ ಮತ್ತು ಇವತ್ತು ಆತನ ಸ್ಥಾನಮಾನಗಳನ್ನು ಗಮನಿಸಿದರೆ ಅತ್ಯಂತ ಶ್ರೀಮಂತ ಬದುಕನ್ನು ಬದುಕುತ್ತಿರುವುದು ಕಂಡು ಬರುತ್ತದೆ. ಆದರೆ ಆ ಉದ್ಯಮದಲ್ಲಿ ಕೂಲಿಕಾರ್ಮಿಕರಾಗಿ ದುಡಿಯುತ್ತಿರುವ ಜನರ ಸಾಮಾಜಿಕ ಬದುಕು ತೃಪ್ತಿಕರವಾಗಿಲ್ಲ ಎಂಬುದನ್ನು ನಾವಿಲ್ಲಿ ಗಮನಿಸಬೇಕು. ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಸೀರೆಗಳ ವಹಿವಾಟವನ್ನು ನಡೆಸುವ ನೇಕಾರ ಉದ್ಯಮೆಗಳು ಒಂದೇ ಕಡೆ ಸ್ಥಿತಿವಂತ ಬದುಕನ್ನು ಸಾಗಿಸುತ್ತಿದ್ದರೆ, ಇನ್ನೊಂದು ಕಡೆ ಉಪಜೀವನಕ್ಕಾಗಿ ಇಲ್ಲಿಗೆ ದುಡಿಯಲು ಬಂದ ಕೂಲಿಕಾರ್ಮಿಕರು ಶಿಕ್ಷಣದಿಂದ ವಂಚಿತರಾಗಿರುವ ಮೂಲಕ ಭೌತಿಕ ಉಪೇಕ್ಷೆಗೆ ಒಳಗಾಗಿದ್ದಾರೆ. ಜೊತೆಗೆ ದೈಹಿಕ ಶ್ರಮದಿಂದ ತಮ್ಮ ಭೌತಿಕ ಆರೋಗ್ಯಕ್ಕೂ ಧಕ್ಕೆ ತಂದು ಕೊಂಡಿದ್ದಾರೆ. ಈ ಮಾತನ್ನು ಗಮನಿಸಿದರೆ ಉತ್ಪಾದಕ ಮತ್ತು ವಿತರಕರ ನಡುವೆ ಮಧ್ಯವರ್ತಿಗಳಿಗೆ ಲಾಭವಾಗುವ ಅನೇಕ ಉದ್ಯೋಗಗಳಂತೆ ನೇಕಾರಿಕೆಯು ಬಂದು ನಿಲ್ಲತ್ತದೆ.

"ನೇಕಾರಿಕೆ ವೃತ್ತಿಯ ವಿಶೇಷತೆ ಎಂದರೆ ಎಲ್ಲ ವಯೋಮಾನದವರಿಗೂ ಇದು ಕೆಲಸ ಕೊಡುತ್ತದೆ. ಆರು ವರ್ಷದಿಂದ ಅರವತ್ತು ವರ್ಷದವರು ಇಲ್ಲಿ ಶ್ರಮಪಡುವ ಅವಕಾಶ ಇದೆ. ನೂಲು ತೊಡುವ, ಹಾಸುಹೊಯ್ಯುವ, ಕಂಡಕಿಸುತ್ತುವ, ಕೆಚ್ಚುವ, ಟಾಣು ಹಾಕುವ, ಹಣೆಗೆ ಕಟ್ಟುವ, ಮಗ್ಗಕ್ಕೇರಿಸುವ, ನೇಯುವ ಸೆರಗುಗಳಿಗೆ ಗೊಂಡೆ ಕಟ್ಟುವ, ಗಿರಾಕಿ ಇಚ್ಚಿಸಿದರೆ ಕಸೂತಿಹಾಕುವ, ಸಿದ್ಧಿವಾದ ಸೀರೆಗಳನ್ನು ದೇವರಿಗೆ ನೈವೇದ್ಯ ಒಯ್ಯುವಂತೆ ಗೌರವ ನಯ ನಾಜೂಕುಗಳಿಂದ ಗಳಿಗೆಗಳನ್ನು ವ್ಯಾಪಾರಸ್ಥರಿಗೆ ಮುಟ್ಟಿಸುವ ಹೀಗೆ ಹತ್ತು ಹಲವು ಕಾರ್ಯಗಳಲ್ಲಿ ಮನೆಮಂದಿಯಲ್ಲ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಹೀಗಾಗಿ ಇದು ಕೌಟುಂಬಿಕ ವೃತ್ತಿಯಾಗಿದೆ. ವಯಸ್ಸು ಹಾಗೂ ಲಿಂಗ ಆಧಾರಿತ ಶ್ರಮ ವಿಭಜನೆ ಇಲ್ಲಿ ಕಡಿಮೆ. ಒಂದು ರೀತಿಯಿಂದ ಗೃಹ ಕೈಗಾರಿಕೆಯಾಗಿದೆ." [೧೨]

ವಿಶೇಷವಾಗಿ ಗಮನಿಸುವ ಒಂದು ಸಂಗತಿ ಎಂದರೆ ಸ್ತ್ರೀಯರು ಬೆಳಗಿನಿಂದ ಸಂಜೆಯವರೆಗೆ ನೇಕಾರಿಕೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ನೂಲು ತೊಡುವ ಹಾಸುಹೊಯ್ಯುವ, ಕಂಡಿಕೆ ಸುತ್ತುವ, ಟಾಣಾ ಹಾಕುವ ಮಗ್ಗಕ್ಕೇರಿಸುವ ಪ್ರತಿಯೊಂದು ಕೆಲಸವನ್ನು ಇಲ್ಲಿಯ ಸ್ತ್ರೀಯರು ನಿರ್ವಹಿಸುತ್ತಾರೆ. ಸಂಶೋಧನೆಯ ದೃಷ್ಟಿಯಿಂದ ಬಹುಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಒಂದು ಅಂದಾಜಿನ ಪ್ರಕಾರ ಸುಮಾರು ಹತ್ತುಸಾವಿರ ಜನರು ನೇಕಾರರು ಇಳಕಲ್ಲಿನಲ್ಲಿರುವುದು ತಿಳಿದುಬರುತ್ತದೆ. ಅಂದರೆ ಮೂಲತಃ ಜಾತಿಯಿಂದ ಈ ಸಮುದಾಯಕ್ಕೆ ಸೇರಿದವರು ಎಂದು ಮಾತ್ರ ಹೇಳಬಹುದು. ಆದರೆ ಅನ್ಯ ಜಾತಿಯವರು ನೇಕಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಗಮನಾರ್ಹ ಸಂಗತಿ.

ವಿಶೇಷವಾಗಿ ಮುಸ್ಲೀಂ ಸಮುದಾಯದವರು ಹಾಗೂ ಅನ್ಯ ಧರ್ಮೀಯರು ನೇಕಾರಿಕೆಯನ್ನು ಅವಲಂಬಿಸಿದ್ದಾರೆ. ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಇಲ್ಲಿಯ ಬಹುತೇಕ ನೇಕಾರ ಕುಟುಂಬಗಳು ಬಂಡವಾಳಶಾಹಿಗಳಾಗಿ ಜೀವಿಸುತ್ತಿದ್ದಾರೆ. ಅವರ ಬದುಕಿಗೆ ಆಡಂಬೋಲಾಗಿ ಅನ್ಯವರ್ಗದ ಕೂಲಿಕಾರ್ಮಿಕರು ಕಂಡುಬರುತ್ತಾರೆ. ಉದಾಹರಣೆಗೆ: ಬಂಡವಾಳಶಾಹಿಗಳಿಂದ ಮತ್ತು ನೇಕಾರರ ಸಹಕಾರ ಸಂಘಗಳಿಂದ ಕಚ್ಚಾ ಸಾಮಗ್ರಿಯನ್ನು ಪಡೆದು ತಮ್ಮ ಮನೆಯಲ್ಲಿ ಕೈಮಗ್ಗಗಳನ್ನು ಸ್ಥಾಪಿಸಿಕೊಂಡು ನೇಕಾರಿಕೆ ವೃತ್ತಿಯನ್ನು ಅವಲಂಬಿಸಿರುವ ಹಲವಾರು ಬೇರೆ ಸಮುದಾಯದ ಕುಟುಂಬಗಳು ಕಾಣಿಸಿಕೊಳ್ಳುವರು. ಹೀಗಾಗಿ ಇಳಕಲ್ಲಿನ ನೇಕಾರ ಜನಾಂಗ ಎಂಬುದು ಜಾತಿ ಮೂಲ ಅಂಕಿ ಅಂಶವೇ ಬೇರೆ, ವೃತ್ತಿಮೂಲ ಅಂಕಿ ಅಂಶಗಳೇ ಬೇರೆ ಎಂಬುದು ನಮ್ಮ ಅಧ್ಯಯನದಿಂದ ತಿಳಿದು ಬರುತ್ತದೆ.

## ೩.೪ ಇಳಕಲ್ಲಿನ ಮಗ್ಗಗಳು

ಇಳಕಲ್ಲಿನ ಮಗ್ಗಗಳನ್ನು ಅಧ್ಯಯನದ ದೃಷ್ಟಿಯಿಂದ (೧) ಕೈಮಗ್ಗಗಳು (೨) ಯಂತ್ರ ಮಗ್ಗಗಳು ಎಂದು ವರ್ಗೀಕರಿಸಬಹುದು. ಯಂತ್ರ ಮಗ್ಗಗಳು ಬರುವುದಕ್ಕಿಂತ ಮೊದಲು ಕೈಮಗ್ಗಗಳ ಉದ್ದಿಮೆ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿತ್ತು. ಇತಿಹಾಸದ ಗರ್ಭದಲ್ಲಿ ಭಾರತೀಯರು ಬಟ್ಟೆ ತಯಾರಿಸುವ ಕಲೆ ಬಹಳಷ್ಟು ಪ್ರಗತಿ ಸಾಧಿಸಿತ್ತು. ಸುಮಾರು ಐದುನೂರು ವರ್ಷಗಳ ಹಿಂದೆ ಸ್ಥಾಪಿಸಲ್ಪಟ್ಟ ಈಜಿಪ್ಪಿನ ಪಿರಾಮಿಡ್‌ಗಳಲ್ಲಿ "ಮಸ್ಲಿನ್" ಬಟ್ಟೆಗಳಿಂದ ಅಲ್ಲಿಯ ಮಮ್ಮಿಗಳನ್ನು ಸುತ್ತಿರುವುದು ತಿಳಿದುಬರುತ್ತದೆ. ಹತ್ತಿ ಭಾರತೀಯ ಕೃಷಿಕರ ಪ್ರಮುಖ ಬೆಳೆ. ಪ್ರಪಂಚದ ಇನ್ನುಳಿದ ರಾಷ್ಟ್ರಗಳಿಗಿಂತ ಹತ್ತಿಯ ಉತ್ಪಾದನೆ ಹೆಚ್ಚಿರುವುದು ತಿಳಿದುಬರುತ್ತದೆ. ಸಹಜವಾಗಿ ಕಚ್ಚಾ ಸಾಮಗ್ರಿಯಾದ ಹತ್ತಿಯಿಂದ ಹತ್ತಿ ಬಟ್ಟೆಗಳು ಹೆಚ್ಚು ಪ್ರಚಲಿತದಲ್ಲಿದ್ದವೆಂದು ಹೇಳಬಹುದು. ಅದು ಏನೆ ಇದ್ದರೂ ಹತ್ತಿ, ಹತ್ತಿಯ ನೂಲು ಮತ್ತು ಅದರಿಂದ ತಯಾರಾಗುತ್ತಿದ್ದ ಬಟ್ಟೆಗಳಿಗೆ ಭಾರತ ಪ್ರಸಿದ್ದಿಯಾಗಿತ್ತು.

ಇಳಕಲ್ಲಿನ ನೇಕಾರಿಕೆಯ ಕೈಮಗ್ಗದಿಂದ ಬೆಳೆದು ನಿಂತಿದೆ. ಹಾಗೆ ನೋಡಿದರೆ ಕೈಮಗ್ಗಗಳ ವಿನ್ಯಾಸ ಅದರಲ್ಲಿ ಅಳವಡಿಸಿದ. ಯಾಂತ್ರಿಕ ವ್ಯವಸ್ಥೆ ಇವೆಲ್ಲವುಗಳನ್ನು ಗಮನಿಸಿದರೆ ಅದು ಒಂದು ಕುಶಲ ಕಲೆಯಾಗಿ ಭಾಸವಾಗುತ್ತದೆ. ಉದಾಹರಣೆಗೆ ವಚನಕಾರ ಜೇಡರ ದಾಸಿಮಯ್ಯ ಹೇಳುವಂತೆ

ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೋಳ ಮುಟ್ಟಿದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯು ನುಂಗಿತ್ತು.
ಈ ಸೀರೆಯ ನೇಯ್ದವ ನಾನೋ ನೀನೋ ರಾಮನಾಥ

ಈ ವಚನದಲ್ಲಿ ಪ್ರಸ್ತಾಪಿಸಿದ ಉಂಕೆ, ಸರಿಗೆ, ಲಾಳಿ. ಮುಳ್ಳು, ಕಂಡಿಕೆ ಮುಂತಾದುವು ಕೈಮಗ್ಗಗಳ ಬಿಡಿ ಭಾಗಗಳು. ಸರ್ವಜ್ಞಕವಿ ಹೇಳುವಂತೆ "ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯು ಮೇಲು" ಎಂದು ಹೇಳುವುದರ ಜೊತೆಗೆ ರಾಟಿಯ ಪ್ರಸ್ತಾವವನ್ನು ಮಾಡುತ್ತಾನೆ. ಹೀಗಾಗಿ ಕೈಮಗ್ಗ ಪ್ರಾರಂಭದಿಂದಲೂ ನಮ್ಮ ಜನರ ಗುಡಿ ಕೈಗಾರಿಕೆಯಾಗಿತ್ತು. ಕೃಷಿಯನ್ನು ಹೊರತುಪಡಿಸಿದರೆ ಕೈಮಗ್ಗ ಉದ್ದಿಮೆಯು ಭಾರತದ ಗ್ರಾಮೀಣ ಜನರ ಉದ್ಯೋಗವನ್ನು ಸೃಷ್ಟಿಸುವಲ್ಲಿ ಮೊದಲಸ್ಥಾನದಲ್ಲಿದೆ. ಅಂಕಿಅಂಶಗಳ ಪ್ರಕಾರ ಮಿಲ್ಲುಗಳು ಶೇ ೬.೬೭ ಯಂತ್ರಮಗ್ಗಗಳು ಶೇ ೩೪.೫೭. ಉದ್ಯೋಗವನ್ನು ಸೃಷ್ಟಿಸಿದ ಕೈಮಗ್ಗಗಳು ಶೇ ೫೮.೭೬ ಈ ಅಂಕಿಅಂಶಗಳಿಂದ ಭಾರತೀಯ ಕೈಮಗ್ಗ ಉತ್ಪಾದನೆಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ತುಂಬಾ ಬೇಡಿಕೆ ಇರುವುದು ಗೋಚರಿಸುತ್ತದೆ. ಸಂಪೂರ್ಣವಾಗಿ

ಮಾನವನ ಶಕ್ತಿ ಸಾಮರ್ಥ್ಯದ ಮೇಲೆ ಅವಲಂಬಿತವಾಗಿರುವ ಕೈಮಗ್ಗ ಉದ್ಯಮ ಅತ್ಯಂತ ನಾಜೂಕಾದ ವಿನ್ಯಾಸಕ್ಕೆ ಸಹಕಾರಿಯಾಗಿದೆ. ಸ್ಥಳೀಯವಾಗಿ ದೊರಕುವ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಕೈಮಗ್ಗವನ್ನು ತಯಾರಿಸುತ್ತಾರೆ. ವಿಶೇಷವಾಗಿ ಅವಿಭಕ್ತ ಪ್ರಜ್ಞೆಯನ್ನು ಇವು ಅವಲಂಬಿಸಿವೆ. ಮನೆ ಮಂದಿಯಲ್ಲ ಕೂಡಿ ದುಡಿಯುವ ಪರಿಪಾಠವನ್ನು ನಮ್ಮ ಕೈಮಗ್ಗಗಳು ಹಾಕಿಕೊಟ್ಟಿವೆ. ಕುಟುಂಬದ ಒಬ್ಬ ಸದಸ್ಯ ಗೈರುಹಾಜರಿ ಆದರೆ ಕೈಮಗ್ಗದ ಒಂದು ಅಂಗವೇ ಮುರಿದಂತೆ, ಹೀಗಾಗಿ ಕೈಮಗ್ಗ ನೇಕಾರಿಕೆ ಮಾಡುವ ಜನರ ಸಾಮೂಹಿಕ ಶ್ರಮ, ಅವಿಭಕ್ತ ಪ್ರಜ್ಞೆ ಮತ್ತು ಕಾಯಕ ನಿಷ್ಠೆಯನ್ನು ಚಾಚು ತಪ್ಪದೇ ಅಪೇಕ್ಷಿಸುತ್ತದೆ.

ಸ್ವರೂಪದ ದೃಷ್ಟಿಯಿಂದ ಕೈಮಗ್ಗ ಉದ್ಯಮೆ ಮೂರು ಪದ್ಧತಿಗಳಲ್ಲಿ ಅನುಷ್ಠಾನಗೊಳ್ಳುತ್ತದೆ.

(1) ಖಾಸಗಿ ವಲಯ (Private srctor) (2) ಸಹಕಾರ ವಲಯ) (Co-operative sector) (3)ಸರಕಾರಿ ವಲಯ (Government sector)

## ೧. ಖಾಸಗಿ ವಲಯ : (Private sector )

ಖಾಸಗಿ ವಲಯದ ನೇಕಾರರನ್ನು ಸ್ವತಂತ್ರ ನೇಕಾರರು ಮತ್ತು ಮಾಲೀಕ ನೇಕಾರರು ಎಂದು ಗುರುತಿಸಬಹುದು. ಸ್ವತಂತ್ರ್ಯ ನೇಕಾರರು ತಮ್ಮದೇ ಆದ ಕೈಮಗ್ಗವನ್ನು ಹೊಂದಿದ್ದು ಬಟ್ಟೆಗೆ ಬೇಕಾದ ಕಚ್ಚಾಮಾಲನ್ನು ಸ್ವಂತಃ ಖರೀದಿಸಿ ಬಟ್ಟೆ ನೇಯ್ದು ಮಾರಾಟ ಮಾಡುತ್ತಾರೆ. ಪ್ರಾಯಶಃ ಈ ನೇಕಾರರು ಹುಟ್ಟು ದೇವಾಂಗ ಸಮುದಾಯದವರೇ ಆಗಿರುವುದು ಹೆಚ್ಚು. ಮಾಲೀಕ ನೇಕಾರರು ತಮ್ಮ ಮನೆಯಲ್ಲಿ ಇಲ್ಲವೆ ಇತರ ನೇಕಾರರ ಮನೆಯಲ್ಲಿ ಕೈಮಗ್ಗಗಳನ್ನು ಹೊಂದಿದ್ದು ಕಚ್ಚಾ ಸಾಮಗ್ರಿಗಳನ್ನು ಕಾರ್ಮಿಕರಿಗೆ ನೀಡಿ ನೇಯ್ದುಕೊಟ್ಟ ಶ್ರಮಕ್ಕೆ ಕೂಲಿಯನ್ನು ಕೊಡುತ್ತಾರೆ. ಈ ಪದ್ಧತಿಗೆ ಮುಂಗಡ ಪದ್ಧತಿ ಎಂದು ಕರೆಯುತ್ತಾರೆ. ಅಂದರೆ ಶೇ೧೫ರಿಂದ ಶೇ೨೦ರಷ್ಟು ಸೀರೆಗೆ ಬೇಕಾಗುವಷ್ಟು ಕಚ್ಚಾಮಾಲಿನ ಪೂರೈಕೆ ಮತ್ತು ಆ ಎಲ್ಲಾ ಉತ್ಪನ್ನಗಳಿಗೆ ಕೂಲಿ ನಿರ್ಧಾರ ಮೊದಲೇ ಆಗಿರುವುದರಿಂದ ಕಚ್ಚಾಮಾಲಿನ ಬೆಲೆಗಳ ಏರಿಳಿತಗಳು ನೇಕಾರರನ್ನು ಬಾಧಿಸುವುದಿಲ್ಲ.

ಮಾಲೀಕ ನೇಕಾರಿಕೆಯಲ್ಲಿ "ಸಟ್ಟಾಪದ್ಧತಿ" ಜಾರಿಯಲ್ಲಿರುತ್ತದೆ. ಇಲ್ಲಿ ನೇಕಾರ ಸೀರೆ ವ್ಯಾಪಾರಸ್ಥನಿಂದ ಹಣವನ್ನು ಸಾಲದ ರೂಪದಲ್ಲಿ ಪಡೆದು ಸೀರೆಗೆ ಬೇಕಾದ ಕಚ್ಚಾಮಾಲನ್ನು ಖರೀದಿಸಿ ಸೀರೆಯನ್ನು ಅದೇ ವ್ಯಾಪಾರಸ್ಥನಿಗೆ ಮಾರಾಟ ಮಾಡುವುದು. ಕಚ್ಚಾ ಮಾಲಿನ ಹಣ ಮತ್ತು ಸೀರೆ ತಯಾರಿಸಿದ ವೆಚ್ಚ ಹೋಗಲಾಗಿ ಬರುವ ಹಣವೇ ನೇಕಾರರ ನಿವ್ವಳ ಲಾಭ. ನೇಕಾರ ತನ್ನ ಸ್ವಂತ ಬಂಡವಾಳದಿಂದ ಕಚ್ಚಾಮಾಲನ್ನು ಖರೀದಿಸಿ ಸೀರೆ ತಯಾರಿಸಿ ಬೆಲೆ ಬಂದ ಕಡೆಗೆ ಮಾರಾಟ ಮಾಡುವುದನ್ನು "ರೋಕಡ ಪದ್ಧತಿ" ಎಂದು ಕರೆಯುತ್ತಾರೆ.

### (೨) ಸಹಕಾರ ವಲಯ (Co-operative sector)

ನೇಕಾರರಿಂದ ನೇಕಾರರಿಗಾಗಿ ಸ್ಥಾಪಿಸಲ್ಪಟ್ಟ ಈ ಸಹಕಾರಿ ಸಂಘಗಳು ಉತ್ಪಾದನೆಗೆ ಒಳ್ಳೆಯ ಮಾರುಕಟ್ಟೆಯನ್ನು ಪ್ರೋತ್ಸಾಹಿಸುತ್ತಲಿವೆ. ಸರಕಾರದಿಂದ ದೊರೆಯುವ ಎಲ್ಲಾ ಸೌಲಭ್ಯಗಳನ್ನು ನೇಕಾರರಿಗೆ ತಲುಪಿಸುವ ಕೆಲಸ ನಿರ್ವಹಿಸುತ್ತಾನೆ. ಈ ಹಿನ್ನೆಲೆಯಲ್ಲಿ ಇಳಕಲ್ಲಿನಲ್ಲಿ ಏಳು ಸಹಕಾರಿ ವಲಯದ ಸಂಘಗಳು ಅಸ್ಥಿತ್ವದಲ್ಲಿದ್ದು, ಅವುಗಳಲ್ಲಿ ಐದು ಲಾಭದಿಂದ ಕೂಡಿದ್ದರೆ, ಇನ್ನೆರಡು ನಷ್ಟದಲ್ಲಿ ನಲಿಗಿ ಹೋಗಿವೆ. ಈ ಸಹಕಾರ ಸಂಘಗಳಲ್ಲಿ ಸದಸ್ಯರಾಗಲು ಅವರದೇ ಆದ ಕೆಲವು ನಿಯಮಗಳಿವೆ. ಅವುಗಳಲ್ಲಿ ಸದಸ್ಯನ ವಯಸ್ಸು ೧೮ಕ್ಕೆ ಸೀಮಿತ. ಸ್ಥಳೀಯ ನಿವಾಸಿಯಾಗಿರಬೇಕು. ಮೂಲ ಉದ್ಯೋಗ ನೇಕಾರಿಕೆಯಾಗಿರಬೇಕು. ಮತ್ತು ಆತ ಕಚ್ಚಾ ನೂಲು ಸೀರೆಗಳ ದಲ್ಲಾಳಿಯಾಗಿರಬಾರದು.

### (೩) ಸರಕಾರಿ ವಲಯ (Government sector)

ಕರ್ನಾಟಕ ಕೈಮಗ್ಗದ ಕ್ಷೇತ್ರದಲ್ಲಿ ನೇಕಾರರ ಸರ್ವಾಂಗೀಣ ಬೆಳವಣಿಗೆಯ ಉದ್ದೇಶದಿಂದ ೧೯೭೫ ರಲ್ಲಿ ಕರ್ನಾಟಕ ಅಭಿವೃದ್ಧಿ ನಿಗಮ ಅಸ್ಥಿತ್ವಕ್ಕೆ ಬಂದಿತು. ಇದರ ಶಾಖೆ ೧೯೭೬ ರಲ್ಲಿ ಇಳಕಲ್ಲಿನಲ್ಲಿ ಕಾರ್ಯಾರಂಭ ಮಾಡಿತು. ಇಳಕಲ್ಲ ಸೀರೆಯ ತಯಾರಿಕೆಯಲ್ಲಿ ಹೊಸ ವಿನ್ಯಾಸ ಮಾರುಕಟ್ಟೆಯ ವಿಸ್ತರಣೆ ಇತ್ಯಾದಿ ಅಭಿವೃದ್ಧಿಪರ ಯೋಜನೆಗಳನ್ನು ರೂಪಿಸಿಕೊಡಿತು. ಇದು ನೌಕರರಿಗೆ ವಸತಿ, ಬ್ಯಾಂಕ್‌ಸಾಲ ಸೌಲಭ್ಯಗಳನ್ನು ನೀಡಿದೆ.

ಒಟ್ಟಿನಲ್ಲಿ ಖಾಸಗಿ ವಲಯದ ಸ್ವತಂತ್ರ ನೇಕಾರರಿಗೆ ೯೪೬ ಕೈಮಗ್ಗಗಳನ್ನು ಇಳಕಲ್ಲಿನಲ್ಲಿ ಹೊಂದಿದ್ದರೆ, ಸಹಕಾರಿ ವಲಯದ ಕೈಮಗ್ಗಗಳು ೨೮೩. ಈ ಅಂಕಿಅಂಶಗಳನ್ನು ಗಮನಿಸಿದರೆ ಸರಕಾರಿ ವಲಯದ ನೇಕಾರಿಕೆ ವಹಿವಾಟು ಸುಸ್ಥಿತಿಯಲ್ಲಿ ಇಲ್ಲದಿರುವುದು ತಿಳಿದು ಬರುತ್ತದೆ. ಮಗ್ಗ ನೂಲಿನ ಎಳೆಯಿಂದ ಬಟ್ಟೆಯಾಗಿ ಪರಿವರ್ತಿಸುವ ಒಂದು ಸಾಧನ. ಮಡಿಕೆಗೆ ಮಣ್ಣು ಹೇಗೋ, ಉಡುಗೆಗಳಿಗೆ ಹೊನ್ನು ಹೇಗೋ ನೂಲು ಮೂಲದ್ರವ್ಯ. ಕೈಮಗ್ಗಗಳ ಸಲಕರಣೆಗಳನ್ನು ಕುರಿತು ಒಂದು ರೀತಿಯ ನೇಕಾರಿಕೆ ವೃತ್ತಿ ಪದಕೋಶವೇ ರಚನೆಯಾಗುತ್ತದೆ. ಉದಾಹರಣೆಗೆ ಅಲ್ಪಿ=(ಬಿದರಿನಸಾಧನ), ಕೈರಾಟೆ, ಕಾಂಡ್ಕಿ= (ಸುತ್ತುವರಾಟಿ) ಹಾಸುಹೊಯ್ಯುವ ಹರಿ (ಪಾಗಡಿರಾಟಿ) ರಾಟ್ಯಾಗ, ಟಾಣಹರಿ, ಕೆಟಗುಣಿಕಿ, ಗೋಡಾ, ಕುಂಟಿ, ಶೆಟಲ್, ಹೊಕ್ಕಳ ಗೂಟ, ಕಿವಿಗೂಟ, ಅರದಂಡಿಗೆ, ಪಿಂಜರ, ಹಗ್ಗದಗೂಟ, ಹಣಗಿ, ತಂತಿಬೆಜ, ಕೈಬೆಜ, ಶೆಳ್ಳು, ಶಲಿಗಿ ಶೆಳ್ಳು, ಲಾಳಿ–ಕೈಲಾಳಿ ಚುಂಗಿಕೋಲು, ಪೇಟಕೋಲು, ವೈಂಡಿಂಗ್ ಮಿಶಿನ್, ಗಾಡಾ, ಕಾಲ್ಪಡಿ, ಶೇಡಕಟಗಿ, ಉಡಾತ್ರ–ಪಿಡಚಿ ನೇಯ್ಗೆ ಹಗ್ಗ, ಕುಂಚ ಪಳಿಗಟಗಿ ತಟ್ಟು ಬಿಜ, ಶೆಟಲ್‌ಗಣಿ–ಕೈಗೂಟ (ರಾಮಲಿಂಗಗೂಟ) ಮಗ್ಗದ ಕುಣಿ ಲಾಳಿ ಹೀಗೆ ಒಂದು ಕೈಮಗ್ಗದ ಬಿಡಿ ಭಾಗಗಳು ಅವುಗಳ ತಾಂತ್ರಿಕತೆಯ ಅಧ್ಯಯನಕ್ಕೆ ಯೋಗ್ಯವಾಗಿದೆ. ಇವುಗಳಲ್ಲಿ

ಲಾಳುಕುಣಿ ಕೈಮಗ್ಗಗಳು, ಉಳಿಯ ಚೌಕಟ್ಟಿನ ಕೈಮಗ್ಗಗಳು ಎಂದು ಎರಡು ವಿಧಗಳನ್ನು ಹೇಳುತ್ತಾರೆ. ಇತ್ತೀಚೆಗೆ ಕುಣಿ ಕೈಮಗ್ಗಗಳಿಗಿಂತ ಚೌಕಟ್ಟಿನ ಕೈಮಗ್ಗಗಳು ಹೆಚ್ಚು ಪ್ರಚಲಿತದಲ್ಲಿರುವುದು ತಿಳಿದು ಬರುತ್ತದೆ. ಯಂತ್ರಗಳ ಮಗ್ಗಗಳನ್ನು 'ಪವರ್ ಲೂಮ್' ಎಂದು ಕರೆಯುತ್ತಾರೆ. ಮೂಲತಃ ವಿದ್ಯುತ್‌ಚಾನಿಂದ ನಡೆಯುವ ಈ ಸಾಧನ ಕೈಮಗ್ಗದ ಕೆಲವು ಪೂರ್ವಸಿದ್ಧತೆಯನ್ನು ಅಪೇಕ್ಷಿಸುತ್ತದೆ. ವೆಸ್ಪಿಂಗ್, ವೈಂಡಿಂಗ್, ವಾರ್ಪಿಂಗ್ ಇತ್ಯಾದಿ ಭಾಗಗಳು ಕೈಮಗ್ಗಗಳಲ್ಲಿರುವಂತೆ ಬೇರೆ ಬೇರೆ ವಿದ್ಯುತ್ಚಾಲಿತ ಉಪಕರಣಗಳಾಗಿವೆ. ಹೀಗೆ ಇಳಕಲ್ಲಿನ ಕೈಮಗ್ಗಗಳಲ್ಲಿ ಸಾಂಪ್ರದಾಯಿಕ ಮತ್ತು ಆಧುನಿಕ ಉಪಕರಣಗಳನ್ನು ಕಾಣಬಹುದಾಗಿದೆ. ಕೈಮಗ್ಗಗಳ ಉತ್ಪನ್ನಗಳಲ್ಲಿ ಶುದ್ಧರೇಷ್ಮೆಸೀರೆಗಳು, ಚಮಕಾ, ಕಾಟನ್‌ಸೀರೆಗಳು ಎಂದು ವರ್ಗೀಕರಿಸುತ್ತಾರೆ. ಐವತ್ತರಿಂದ ಅರವತ್ತು ವಿವಿಧ ವಿನ್ಯಾಸಗಳಲ್ಲಿ ತಯಾರಾಗುವ ಸೀರೆಗಳು ಇಳಕಲ್ಲ ಕೈಮಗ್ಗದ ಉದ್ಯಮದಲ್ಲಿಯೇ ಒಂದು ಸಾಧನೆ ಎನ್ನಬಹುದು. ಡಿಜೈನ್ ತಯಾರಿಕೆ, ಡಿಜನ್ ಬದಲಾಯಿಸಲು ಬೇಕಾಗುವ ಸಲಕರಣೆ ಇತ್ಯಾದಿ ಆಧುನಿಕ ಪದ್ಧತಿಯನ್ನು ಮೈಗೂಡಿಸಿಕೊಂಡಿರುವ ಇಳಕಲ್ಲಿನ ಮಗ್ಗಗಳಿಗೆ ರಾಷ್ಟ್ರಮಟ್ಟದ ಸಾಂಸ್ಕೃತಿಕ ಸ್ಥಾನಮಾನಗಳು ಲಭಿಸಿವೆ.

## ಅಡಿ ಟಿಪ್ಪಣಿಗಳು

೧. ಭಾರತದ ಗೆಜೆಟೀಯರ್-ಕರ್ನಾಟಕ ರಾಜ್ಯ ಬಿಜಾಪುರ ಜಿಲ್ಲೆ, ಪುಟ ಸಂಖ್ಯೆ-೪೦೩

೨. ಗವರ್ನಮೆಂಟ್ ಆಫ್ ಕರ್ನಾಟಕ ಡಿಪಾರ್ಟಮೆಂಟ್ ಆಫ್ ಇಂಡಸ್ಟ್ರೀಜ ಆಂಡ್ ಕಾಮನ್ ಸೆನ್ಸ್ ಆಫ್ ಹ್ಯಾಂಡ್‌ಲೂಮ್ಸ್, ಬೆಂಗಳೂರು, ಪುಟಸಂಖ್ಯೆ- ೧೩೬

೩. ಗ್ಯಾಸೇಟಿಯರ್ ಆಫ್ ಬಾಂಬೆ ಪ್ರೆಸಿಡೆನ್ಸಿ –VOL-XXIII (ಬಿಜಾಪುರ) ೧೯೮೪

೪. ಹೇಮತುಂಗ(ವಿಶೇಷ ಸಂಚಿಕೆ) ಸಂ. ಕೆ. ಸಿ. ತಿಪ್ಪಶೆಟ್ಟಿ ಬೆಂಗಳೂರು ೧೯೯೯

೫. ದಕ್ಷಿಣ ಕನ್ನಡ ಹಾಗೂ ಕಾಸರಗೂಡಿನ ಶಾಲಿಯ/ದೇವಾಂಗ ಸಮುದಾಯದ ಅಧ್ಯಯನ, ೨೦೦೩ (ಅಪ್ರಕಟಿತ)

೬. ದಕ್ಷಿಣ ಕನ್ನಡ ಹಾಗೂ ಕಾಸರಗೂಡಿನ ಶಾಲಿಯ/ದೇವಾಂಗ ಸಮುದಾಯದ ಅಧ್ಯಯನ, ೨೦೦೩ (ಅಪ್ರಕಟಿತ)

೭. ದಕ್ಷಿಣ ಕನ್ನಡ ಹಾಗೂ ಕಾಸರಗೂಡಿನ ಶಾಲಿಯ/ದೇವಾಂಗ ಸಮುದಾಯದ ಅಧ್ಯಯನ, (೨೦೦೩ ಅಪ್ರಕಟಿತ)

೮. ದಕ್ಷಿಣ ಕನ್ನಡ ಹಾಗೂ ಕಾಸರಗೂಡಿನ ಶಾಲಿಯ/ದೇವಾಂಗ ಸಮುದಾಯದ ಅಧ್ಯಯನ, ೨೦೦೩(ಅಪ್ರಕಟಿತ)

೯. ಕನ್ನಡ ವಿಶ್ವವಿದ್ಯಾಲಯ, ಹಸ್ತಪ್ರತಿ ಸೂಚಿ ಸಂಪುಟ-೧ ಪುಟ-೧೬೦

೧೦. ಶಂಕರ ಎಂ. ಬುಚಡಿ, ಹೇಮಕೂಟ, ಪುಟ-೨೨ ರಿಂದ ೨೮

೧೧. ಹರಿಹರನ ರಗಳೆಗಳು, ಸಂ. ಡಾ.ಎಂ.ಎಂ.ಕಲಬುರ್ಗಿ ಪುಟ ೧೮೯

೧೨. ಇಳಕಲ್ಲ ಸೀರೆ, ಡಾ. ಮಹೇಶ್ ತಿಪ್ಪಶೆಟ್ಟಿ ಪು-೧೪

# ಅಧ್ಯಾಯ : ನಾಲ್ಕು

# ಇಳಕಲ್ಲ ಸೀರೆ : ಸಾಂಸ್ಕೃತಿಕ ಅಧ್ಯಯನ

೧. ಬಣ್ಣಗಳು : ತಯಾರಿಕೆ-ಪ್ರಕಾರಗಳು

೨. ಸೀರೆ ವಿನ್ಯಾಸ : ವಡ್ಲು-ದಡಿ-ಸೆರಗು

೩. ಆಚರಣೆ : ಇಲಿಪೂಜೆ-ಜಾತ್ರೆ

೪. ಗಾದೆ-ಪಡಿನುಡಿಗಳು

# ಅಧ್ಯಾಯ : ನಾಲ್ಕು

# ಇಳಕಲ್ಲ ಸೀರೆ : ಸಾಂಸ್ಕೃತಿಕ ಅಧ್ಯಯನ

## ೪.೧ ಬಣ್ಣಗಳು : ತಯಾರಿಕೆ– ಪ್ರಕಾರಗಳು

ಭಾರತೀಯ ಜೀವನಕ್ರಮದಲ್ಲಿ ಕಲೆಗೆ ವಿಶೇಷವಾದ ಮಾನ್ಯತೆ ನೀಡಲಾಗಿದೆ. ಈಗಾಗಲೇ ವಿದ್ವಾಂಸರು ಕಲೆಯನ್ನು ಲಲಿತಕಲೆ, ಕುಶಲಕಲೆಯಂತಲೂ, ಲಲಿತಕಲೆಯಲ್ಲಿ ದೃಶ್ಯಕಲೆ, ದೃಶ್ಯೇತರ ಕಲೆಯಂತಲೂ ಅಧ್ಯಯನ ಮಾಡಿದ್ದಾರೆ. ಹಾಗೆಯೇ ಕುಶಲಕಲೆಯಲ್ಲಿ ಸೌಂದರ್ಯಮೂಲ ಮತ್ತು ಪ್ರಯೋಜನಮೂಲವೆಂದು ವರ್ಗೀಕರಿಸುತ್ತಾರೆ. ಬಣ್ಣ ರೇಖೆಗಳಿಂದೊಡಗೂಡಿದ ಚಿತ್ರಕಲೆಗಳಲ್ಲೂ ವಿಶೇಷ ಸೊಗಸು ಗೋಚರಿಸುತ್ತದೆ. ಕಲ್ಲು, ಮಣ್ಣು, ಲೋಹ, ಬಟ್ಟೆ, ಭಿತ್ತಿ ಮುಂತಾದ ಮಾಧ್ಯಮಗಳಲ್ಲಿ ಸೃಷ್ಟಿಗೊಂಡ ಚಿತ್ರಕಲೆ ಅದೊಂದು ಸ್ವತಂತ್ರ ಅಧ್ಯಯನ ವಿಷಯವಾಗಿ ಬೆಳೆದು ಬಂದಿದೆ.

ಇಳಕಲ್ಲ ಸೀರೆಯ ಚಿತ್ರವಿನ್ಯಾಸಕ್ಕೆ ಅಲ್ಲಿ ಬಳಕೆಯಾದ ರೇಖೆಗಳು ಮತ್ತು ಬಣ್ಣಗಳು ಪ್ರಮುಖ ಸಾಧನಗಳಾಗಿವೆ. ಮೊದಲು ತನ್ನ ಸುತ್ತಮುತ್ತ ಸಿಗುವ ನೈಸರ್ಗಿಕ ವಸ್ತುಗಳಾದ ಕಲ್ಲು, ಮಣ್ಣು, ಹೂವು, ಎಲೆ ಮುಂತಾದ ಸಾಮಗ್ರಿಗಳಿಂದ ಬಣ್ಣವನ್ನು ತಯಾರಿಸುವ ಪರಿಪಾಠ ಇತ್ತು. ಇತ್ತೀಚೆಗೆ ರಸಾಯನಿಕ ಬಣ್ಣಗಳು ತಯಾರಾಗಿ ಪ್ರಾಚೀನ ಬಣ್ಣ ತಯಾರಿಕೆಯ ಕಲೆ ನಶಿಸಿ ಹೋಗಿವೆ. ಒಂದು ಕಾಲಕ್ಕೆ, ಕೆಂಪು ಬಣ್ಣಕ್ಕೆ ಡಾಣಿ, ಪಿಸ್ತಾಪಲ್, ಹಸಿರುಬಣ್ಣಕ್ಕೆ ಅಳ್ಳೆಕಾಯಿ, ಕಾಕಡಸಿಂಬಿ, ಹಳದಿಬಣ್ಣಕ್ಕೆ "ಕಪೀಲಬೀಜ,

ಕರಿಬಣ್ಣಕ್ಕೆ ಮಡ್ಡಿಬೇರು, ಮಡ್ಡಿತೊಪ್ಪಲು, ಸುಣ್ಣ ಮುಂತಾದವುಗಳನ್ನು ಉಪಯೋಗಿಸುತ್ತಿದ್ದರು" [?] ಆದರೆ, ಪ್ರಾಚೀನ ಬಣ್ಣಗಾರಿಕೆಯಲ್ಲಿ ಅದ್ಭುತ ಪರಿಣಿತಿಯನ್ನು ಹೊಂದಿದ್ದ ಇಳಕಲ್ಲ ಸೀರೆ ತಯಾರಕರು ಬಹುಕಾಲ ಸೀರೆಗಳ ಬಣ್ಣ ಅಳಸಿ ಹೋಗದಂತೆ ಬಣ್ಣ ತಯಾರಿಕೆಯಲ್ಲಿ ತಮ್ಮ ಜಾಣ್ಮೆಯನ್ನು ಮೆರೆದಿದ್ದರು. "ಸೀರೆ ಹರಿದರೂ ಬಣ್ಣ ಮಾಸುವುದಿಲ್ಲ" ಎಂಬ ನಾಣ್ನುಡಿ ಇಳಕಲ್ಲ ಸೀರೆಗಳ ಬಣ್ಣದ ಗುಣಮಟ್ಟವನ್ನು ಪ್ರತಿನಿಧಿಸುತ್ತದೆ.

ನೂಲಿಗೆ ಬಣ್ಣ ಹಾಕುವ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಅನೇಕ ಕುಟುಂಬಗಳು ತಮ್ಮ ವೃತ್ತಿಯಿಂದ ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ನೀಲಗಾರರು, ಮಡ್ಡಿಗಾರರು, ಬಣಗಾರರು ಇನ್ನು ಮುಂತಾದ ಪಂಗಡಗಳಿವೆ. ನೀಲಗಾರರು ನೀಲಿ ಇಂಡಿಗೋ ಬಣ್ಣವನ್ನು ಬಣ್ಣಗಾರಿಕೆಯಲ್ಲಿ ತೊಡಗಿಸಿಕೊಂಡವರು. ಮಡ್ಡಿಕಾರರು ಕೆಂಪು ಬಣ್ಣಗಾರಿಕೆಯಲ್ಲಿ ನಿರತರಾದವರು. ಉಳಿದ ಬಣ್ಣಗಾರಿಕೆಯಲ್ಲಿ ತೊಡಗಿದವರನ್ನು ಬಣಗಾರರು ಎಂದು ಕರೆಯುವ ರೂಢಿಯಿದೆ. ಬಣ್ಣಹಾಕುವ ಕಾರ್ಯ ಒಂದು ಕಾಲಕ್ಕೆ ಗೌಪ್ಯತೆಯನ್ನು ಕಾಯ್ದುಕೊಂಡಿತ್ತು. ಅದಕ್ಕೆ ಹಲವು ಕಾರಣಗಳಿರಬಹುದು. ಇಳಕಲ್ಲಸೀರೆಯ ಬಣ್ಣತಯಾರಿಕೆಯಲ್ಲಿ ಸಸ್ಯಜನ್ಯ ಮತ್ತು ಪ್ರಾಣಿಜನ್ಯ ಎಂದು ಎರಡು ಪ್ರಕಾರಗಳಿವೆ. ಅಲ್ಲದೇ ಈ ಸೀರೆಗಳ ಬಣ್ಣದ ಗ್ಯಾರಂಟಿಯಲ್ಲಿ ಪ್ರಮುಖ ಪಾತ್ರವಹಿಸುವುದು ಇಲ್ಲಿ ಹರಿಯುವ ಹಿರೇಹಳ್ಳದ ನೀರು. ಬಹುಶಃ ಬೀದರಿನ ಬಿದ್ರಿ ಕಲೆಗೆ ಅಲ್ಲಿಯ ಕೋಟೆಯ ಮಣ್ಣಿನಂತೆ, ಇಳಕಲ್ಲಿನ ಹಿರೇಹಳ್ಳದ ನೀರು ಬಣ್ಣಗಾರಿಕೆಯಲ್ಲಿ ಪ್ರಾದೇಶಿಕ ವೈಶಿಷ್ಟ್ಯವನ್ನು ಮೆರೆದಿರುವುದು ಇಳಕಲ್ಲ ಸೀರೆಯ ಸಾಂಸ್ಕೃತಿಕ ಅಧ್ಯಯನದ ಒಂದು ಪ್ರಮುಖ ಅಂಶವೆನ್ನಬಹುದು.

ಬಣ್ಣ ತಯಾರಿಕೆಗಾಗಿ ದೊಡ್ಡ ಒಲೆ ಅದರ ಮೇಲೆ ದೊಡ್ಡಪಾತ್ರೆಯಲ್ಲಿ ಬಣ್ಣ ಕುದಿಸಿ ಅದರಲ್ಲಿ ನೂಲಿನ ಲಡಿಗಳನ್ನು ಉದ್ದನೆಯ ಕೋಲಿನ ಸಹಾಯದಿಂದ ಪಾತ್ರೆಗಳೊಳಗೆ ಇಳಿಬಿಟ್ಟು ಆ ನೂಲು ಬಣ್ಣವನ್ನು ಹೀರಿಕೊಂಡ ಬಳಿಕ ಮೇಲೆತ್ತಿ ತಂಪಾದ ನೀರಿನ ಡೋಣಿಯಲ್ಲಿ ಜಾಲಾಡುತ್ತಾರೆ. ನಂತರ ಅದನ್ನು ಹಿಂಡಿ ಬಿಸಿಲಿನಲ್ಲಿ ಒಣಗಿಸುತ್ತಾರೆ. ಇಳಕಲ್ಲಿನಲ್ಲಿ ಕರಿಚಂದ್ರಕಾಳಿ ಸೀರೆಯ ಜೊತೆಗೆ ಶುದ್ಧ ಹತ್ತಿನೂಲಿನ ಕೆಂಪು ಅಂಚಿನ ಸೀರೆಗಳನ್ನು ನೇಯ್ಯುತ್ತಿದ್ದರು. ಇವುಗಳಿಗೆ ಪಂಚೇದ ಅಂಚಿನ ಸೀರೆಗಳು ಎಂದು ಕರೆಯುವ ರೂಢಿ, ಈ ಕೆಂಪು ಹಳದಿಬಣ್ಣಗಳನ್ನು ಸ್ಥಳೀಯವಾಗಿ ದೊರೆಯುವ ಮಡ್ಡಿಗಿಡದ ತೊಗಟೆಯಿಂದ ತಯಾರಿಸಲಾಗುತ್ತಿತ್ತು. ಈಗಲೂ ಇಳಕಲ್ಲಿನ ಸಮೀಪವಿರುವ ಗೋರೆಬಾಳ ಗ್ರಾಮದಲ್ಲಿ ಮಡ್ಡಿ ಬಣ್ಣ ತಯಾರಿಸುವ ಕುಟುಂಬಗಳಿವೆ. ಮಡ್ಡಿ ಬಣ್ಣಗಾರಿಕೆಯಲ್ಲಿ ಬಳಕೆಯಾಗುತ್ತಿದ್ದ ಕಚ್ಚಾ ಸಾಮಗ್ರಿಗಳೆಂದರೆ ಕುರಿಹಿಕ್ಕಿ, ಕುಸುಬಿ ಎಣ್ಣೆ, ಸವಳು, ಮಡ್ಡಿಗಿಡದ ಬೇರಿನ ತೊಗಟೆ, ಹಾಗೆಯೇ ಇಂಡಿಗೋ ಬಣ್ಣಗಾರಿಕೆಯಲ್ಲಿ ಬಳಕೆಯಾಗುವ ನೈಸರ್ಗಿಕ ವಸ್ತುಗಳೆಂದರೆ ಇಂಡಿಗೋ, ಕೇಕು, ಸುಟ್ಟಬಣ್ಣ, ಸವಳು, ನಾಯಿಯಹೆಸಳು, ಬೆಲ್ಲ, ಬಾಳೆಗಿಡದ ಭಸ್ಮ, ಈ ಎಲ್ಲಾ ಕಚ್ಚಾ ಸಾಮಗ್ರಿಗಳಿಂದ ಬಣ್ಣ ತಯಾರಿಸುವ ವೈಧಾನಿಕತೆಯನ್ನು ಅಳವಡಿಸಿಕೊಳ್ಳಲಾಗಿದೆ. ಅವುಗಳಲ್ಲಿ ಮಾರ್ಡಡಂಟ ಲೇಪನ,

ಕಾಕಿನಿಲ್, ಬಣ್ಣಗಾರಿಕೆ ಮುಂತಾದ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಕಪೀಲಿ ಬಣ್ಣಕ್ಕೆ ಕಪೀಲಿ ಬೀಜವನ್ನು, ಹಳದಿಬಣ್ಣಕ್ಕೆ ಅರಿಷಿಣವನ್ನು, ಕಪ್ಪುಬಣ್ಣಕ್ಕೆ ಕಾಚನ್ನು, ಜಾಂಬಾಳ ಬಣ್ಣಕ್ಕೆ ಜಾಲಿಬೀಜವನ್ನು, ಕಂದು ಬಣ್ಣಕ್ಕೆ ಮದುರಂಗಿ ಬಣ್ಣವನ್ನು ಕೆಂಪು ಬಣ್ಣಕ್ಕೆ ಕಾಕಿನೀಲ್ ಮತ್ತು ಮಡ್ಡಿಯನ್ನು ಉಪಯೋಗಿಸುವುದನ್ನು ಇಳಕಲ್ಲ ಸೀರೆಯ ಬಣ್ಣಗಾರಿಕೆಯಲ್ಲಿ ಕಾಣಬಹುದಾಗಿದೆ.

ಮೊದಲಿನಿಂದಲೂ ನಮ್ಮ ಪ್ರಾಚೀನರು ತಮ್ಮ ಸುತ್ತಲಿನ ಸಾಮಗ್ರಿಗಳನ್ನು ಬಳಸಿಕೊಂಡು ಬಣ್ಣ ತಯಾರಿಸುತ್ತಿದ್ದ ಬಗ್ಗೆ ಈ ಮೊದಲು ಸಸ್ಯಜನ್ಯ, ಪ್ರಾಣಿಜನ್ಯ, ಬಣ್ಣಗಾರಿಕೆಯ ಉಲ್ಲೇಖಗಳನ್ನು ನೀಡಿದ್ದೇವೆ. ವಿಶೇಷವಾಗಿ ಬಣ್ಣದ ಬಳಕೆ ಮತ್ತು ತಯಾರಿಸುವ ವಿಧಾನವನ್ನು ಕುರಿತು ಪ್ರಾಚೀನ ಕಾವ್ಯಗಳು ಉಲ್ಲೇಖಿಸುತ್ತವೆ. ಅವುಗಳಲ್ಲಿ ಪದ್ಮಸಂಹಿತೆ ಪಂಚವರ್ಣಗಳನ್ನು ಹೇಳಿದರೆ, ಪೊನ್ನ ತನ್ನ ಶಾಂತಿಪುರಾಣದಲ್ಲಿ ಪಂಚರುಚಿ, ಪ್ರತಿಕೃತಿ, ಹರಿತಂ, ತಾಂಭ್ರ, ಕೃಷ್ಣ, ಪೀತ, ಸೀತಾ, ಎಂಬುದಾಗಿ ತಿಳಿಸುತ್ತಾನೆ. ವಚನಕಾರ ಮೋಳಿಗೆ ಮಾರಯ್ಯ ಷಡುವರ್ಣದ ಕಡೆಗೆ ನಮ್ಮ ಗಮನ ಹರಿಸುತ್ತಾನೆ. ಹಾಗೆಯೇ ಕವಿ ಚೌಂಡರಸ ಷಡ್ವವರ್ಣದ ಉಲ್ಲೇಖ ನೀಡುತ್ತಾನೆ. ಪಾಯಣವರ್ಣೆ, ಕವಿ ಹರಿತ, ಪೀತ, ಶ್ವೇತ, ಕೃಷ್ಣ ಮುಂತಾದ ಬಣ್ಣಗಳ ಉಲ್ಲೇಖವನ್ನು ನೀಡುತ್ತಾನೆ.

ಬಿಳಿಬಣ್ಣ ತಯಾರಿಕೆಯಲ್ಲಿ ಪ್ರಾಚೀನರು ಸಂಗಮರಿ ಕಲ್ಲಿನ ಚೂರುಗಳನ್ನು ಸುಟ್ಟು ನೀರಿನಲ್ಲಿ ನೆನೆಸಿ ಸೋಸಿ, ಅಂಟುನೀರಿನಲ್ಲಿ ಮಿಶ್ರಣ ಮಾಡಿ ಬಿಳಿ ಬಣ್ಣ ತಯಾರಿಸುವ ವಿಧಾನವನ್ನು ಕಂಡುಕೊಂಡಿದ್ದರು. ಹಾಗೆಯೇ ಹುರಿಮಂಜು ಎಂಬ ಮಣ್ಣಿನಿಂದ ಕೆಂಪು ಬಣ್ಣವನ್ನು ತಯಾರಿಸುತ್ತಿದ್ದರು. ಕೆಂಪು ಬಳಪದ ಕಲ್ಲಿನಿಂದ ಕಾವಿಬಣ್ಣ, ಇಂಗಳಿಕಗಳಿಂದ ಕೆಂಪುಬಣ್ಣ ತಯಾರಿಸುವ ಪರಂಪರೆ ನಮ್ಮಲ್ಲಿತ್ತು. ಕಪ್ಪುಬಣ್ಣಕ್ಕೆ ಸಂಬಂಧಿಸಿದಂತೆ ಸಾಸಿವೆ ಎಣ್ಣೆ ಇಲ್ಲವೇ ಔಡಲಎಣ್ಣೆಯಿಂದ ಕರ್ಪೂರದಿಂದ ಕೂಡಿದ ಬತ್ತಿಯನ್ನು ಉರಿಸಿ ಕಾಡಿಗವನ್ನು ತಯಾರಿಸುತ್ತಿದ್ದರು. ಇದಕ್ಕೆ ಅಂಟಿನ ನೀರನ್ನು ಬೆರೆಸಿ ಕಪ್ಪು ಬಣ್ಣವನ್ನು ಸಿದ್ದಪಡಿಸುವ ಕಲೆಯನ್ನು ರೂಢಿಸಿಕೊಂಡಿದ್ದರು. ನೀಲಿ ಬಣ್ಣಕ್ಕೆ ಸಂಬಂಧಿಸಿದಂತೆ ನೀಲಿ ಸಸ್ಯದ ಪುಡಿಯನ್ನು ಅಂಟಿನೊಡನೆ ಬೆರೆಸಿ ತಯಾರಿಸುತ್ತಿದ್ದರು. ತುಂಬೆ ಹೂವು ಮತ್ತು ಎಲೆಗಳನ್ನು ಈ ಬಣ್ಣಕ್ಕೆ ಬಳಸಲಾಗುತ್ತದೆ. ಹಳದಿ ಬಣ್ಣ ತಯಾರಿಕೆಯಲ್ಲಿ ಹೈಟಿಗೆ ತೋಡಿ, ಎಳೆಗಳು ಸರಳವಾಗಿ ಬಿಡುವಂತಾಗಲು ತೋಡಿದ ಹೈಟಿಗೆ ಚೆನ್ನಾಗಿ ತಣ್ಣೀರು ಬಡಿದು ಕೈರಾಟಿಯ ಮುಖಾಂತರ ಕಂಡಿಕೆಗೆ ಸುತ್ತುತ್ತಾರೆ. ಈ ಕಂಡಿಕೆಗಳನ್ನು ಒಂದು ಬಿದರಿನ ತಟ್ಟೆಯಲ್ಲಿ ಹಾಕಿ ಬಿಸಿಲಿನಲ್ಲಿ ಒಣಗಿಸುವರು. ನಂತರ ಸೆಟಲ್ ಲಾಳಿಯ ಕಬ್ಬಿಣದ ಸುಲಂಗಿಗೆ ಈ ಕಂಡಿಕೆಗಳನ್ನು ಸೇರಿಸುತ್ತಾರೆ. ಈ ಎಲ್ಲಾ ಕಾರ್ಯವಾದ ಮೇಲೆ ಕಡ್ಡಿಯ ಹಣಗಿಯನ್ನು ಮಗ್ಗಕ್ಕೆ ಏರಿಸಿ ಮಡಕಿ(ಚುಂಗು)ಕಟ್ಟಿದ ಮೇಲೆ ನೇಯ್ಗೆ ಪ್ರಾರಂಭಿಸುತ್ತಾರೆ

ಬಣ್ಣಗಾರಿಕೆಯಲ್ಲಿ ಗೌರಿಮರದ ಎಲೆಗಳ ರಸವನ್ನು ಬಳಸುತ್ತಿದ್ದರು. ಹಾಗೇಯೇ ಉರ್ಚಿಕಾಯಿ , ಬೆಂಗಾಲಿ ಕಾಯಿ, ಹಣ್ಣಿನ ರಸಗಳಿಂದ ಹಳದಿ ಬಣ್ಣ ಸಿದ್ದಗೊಳ್ಳುತ್ತಿತ್ತು. ಹಳದಿ ಮತ್ತು ನೀಲಿ ಬಣ್ಣಗಳ ಸಮ್ಮಿಶ್ರಣವೇ ಹಸಿರು ಬಣ್ಣ. ಹೀಗೆ ಪ್ರಾಚೀನ ಬಣ್ಣಗಾರಿಕೆಯ ನೈಪುಣ್ಯತೆಯನ್ನು ಹೊಂದಿದ್ದ ಬಣಗಾರ ಮನೆತನಗಳು ಕರ್ನಾಟಕದಲ್ಲಿ ಕಂಡು ಬರುತ್ತವೆ. ಬಹುಶ: ಆಧುನಿಕ ಕಾಲಕ್ಕಿಂತ ಪೂರ್ವದಲ್ಲಿ ಇಳಕಲ್ಲ ಸೀರೆಯ ಬಣ್ಣ ತಯಾರಿಕೆಯಲ್ಲಿ ಇದೇ ಮಾದರಿಯನ್ನು ಅನುಸರಿಸಿದಂತೆ ತೋರುತ್ತದೆ. ಅದಕ್ಕೆ ಸಂಬಂಧಿಸಿದಂತೆ ಈ ಮಾಹಿತಿಗೆ ಪೂರಕವೆಂಬಂತೆ ಗೋರೆಬಾಳ ಗ್ರಾಮದ ಮಡ್ಡಿಗಾರರ ಕುಟುಂಬಗಳನ್ನು ಇಲ್ಲಿ ಸ್ಮರಿಸಬಹುದು.

ಒಟ್ಟಿನಲ್ಲಿ ಸೀರೆಗಳಿಗೆ ನೇಯ್ಗೆಯ ಮೊದಲು ಬಣ್ಣ ಕಟ್ಟಲಾಗುತ್ತದೆ. "ಸೀರೆಗಳಿಗೆ ಉಪಯೋಗಿಸುವ ಬಣ್ಣದ ತಗಡಿನ ಡಬ್ಬಿಗಳಿಗೆ ತೋಡಿ, ನಂತರ ಮಿಶ್ರಣಮಾಡಿ ಹಿಂಡಿ, ಕಟ್ಟಿಗೆಯ ಹರಿಯನ್ನು ಗೋಡೆಗೆ ಹಾಕಿ ಚಮಕಾವನ್ನು ಹೊಯ್ಯುತ್ತಾರೆ. ಈ ಹೊಯ್ದ ಚಮಕಾವನ್ನು ಪೂರ್ತಿಯಾಗಿ ಮೀನಿನ ಸರಿಯಲ್ಲಿ ಎದ್ದಿ, ಹೊರಗೆ ಒಣ ಹಾಕಿ ಎಳೆಗಳನ್ನು ಬಿಡಿಸುತ್ತಾರೆ ಇದಕ್ಕೆ 'ಚಾಳಿಸುವುದು' ಎನ್ನುತ್ತಾರೆ. ವಡ್ಲದ ಒಂದೊಂದು ಎಳೆಗಳಿಗೆ ಸೆರಗಿನ ಎಳೆಯನ್ನು ಕೂಡಿಸುವುದಕ್ಕೆ 'ಠಾಣ' ಎಂದು ಹೆಸರು. ಇದಾದ ಮೇಲೆ ಸೆರಗಿನ ಎಳೆಗಳನ್ನು 'ಹಣಗಿ' ಎಳೆಗಳಿಗೆ ಕೂಡಿಸುತ್ತಾರೆ. ಇದಕ್ಕೆ 'ಹಣಗಿ' ಕಟ್ಟುವುದು ಎನ್ನುವರು.

ಇಳಕಲ್ಲ ಸೀರೆಗಳ ಇತ್ತೀಚಿನ ಆಧುನಿಕ ಬಣ್ಣಗಳು ಹಾಗೂ ಅವುಗಳ ಬಳಕೆ ಕುರಿತಂತೆ ಡಾ. ಪಿ.ಎಸ್. ಕಂದಗಲ್ ಅವರು ಇಳಕಲ್ ಸೀರೆ ಬಣ್ಣ ಹಾಗೂ ವಿನ್ಯಾಸ : ಒಂದು ಅಧ್ಯಯನ ಎಂಬ ಮಹಾಪ್ರಬಂಧದಲ್ಲಿ ಈ ಕೆಳಗಿನಂತೆ ತಿಳಿಸುತ್ತಾರೆ.

೧. ಸಲ್ಫರ್‌ಬಣ್ಣಗಳು (Sulphur Dyes)

೨. ನೆಪ್ಥಾಲ್ ಅಥವಾ ಅಜೋಯಿಕ್ ಬಣ್ಣಗಳು (Naphthol or Azoic Dyes)

೩. ನೇರ ಬಣ್ಣಗಳು (Direct Dyes)

೪. ಆಮ್ಲ ಬಣ್ಣಗಳು (Acid Dyes)

೫. ಪ್ರತ್ಯಾಮ್ಲ ಬಣ್ಣಗಳು (Basic Dyes)

೬. ವ್ಯಾಟ್ ಬಣ್ಣಗಳು (Vat Dyes )

ಉಪಯೋಗಕ್ಕನುಗುಣವಾಗಿ ಬಣ್ಣಗಳ ವರ್ಗೀಕರಣ ಈ ರೀತಿ ಯಾಗಿದೆ.

| ಕ್ರಸಂ. | ಬಣ್ಣದ ವರ್ಗ | ಬಣ್ಣ ಹಾಕಲ್ಪಡುವ ಕಚ್ಚಾ ನೂಲು | ಬಣ್ಣ ಹಾಕುವ ವಿಧಾನ |
|---|---|---|---|
| ೧ | ನೆಪ್ಥಾಲ್ಅಥವಾಅಝೋಯಿಕ್ ಬಣ್ಣಗಳು | ಹತ್ತಿನೂಲು, ಚಮಕಾರೇಷ್ಮೆ | ಕಚ್ಚಾನೂಲನ್ನು ನೆಪ್ಥಾಲ್ ದ್ರಾವಣದಲ್ಲಿ ನೆನೆಸಿ ನಂತರ ಸ್ಥಿರಡಾಯ್ ಜೋನಿಯಂ ಲವಣದ ದ್ರಾವಣದಲ್ಲಿ ಅದ್ದುವದು. |
| ೨ | ಸಲ್ಫರ್ ಬಣ್ಣಗಳು | ಹತ್ತಿನೂಲು, ಚಮಕಾ | ಸೋಡಿಯಂ ಸಲ್ಫೆಟನಲ್ಲಿ ಕರಗಿರುವ ಸಲ್ಫರ್ ಬಣ್ಣದಲ್ಲಿ ನೂಲನ್ನು ಕುದಿಸಿ ನಂತರ ಗಾಳಿಗೆ ಒಡ್ಡಿ ಉತ್ಕರ್ಷಿಸುವುದರ ಮೂಲಕ ಕರಗಲಾಗದ ಸಲ್ಫರ್ ಬಣ್ಣವನ್ನು ಪ್ರಕ್ಷೇಪಗೊಳಿಸುವುದು. |
| ೩ | ನೇರ ಬಣ್ಣಗಳು | ಹತ್ತಿನೂಲು ಮತ್ತು ಚಮಕಾ | ತಟಸ್ಥ ಅಥವಾ ಪ್ರತ್ಯಾಮ್ಲಿಯ ಮಾಧ್ಯಮದಲ್ಲಿ ಬಣ್ಣ ಹಾಕುವದು |
| ೪ | ಆಮ್ಲ ಬಣ್ಣಗಳು | ರೇಷ್ಮೇ | ತಟಸ್ಥ ಅಥವಾ ಆಮ್ಲೀಯ ಮಾಧ್ಯಮದಲ್ಲಿ ಬಣ್ಣ ಹಾಕುವುದು |
| ೫ | ಪ್ರತ್ಯಾಮ್ಲೀಯ ಬಣ್ಣಗಳು | ರೇಷ್ಮೇ | ಆಮ್ಲೀಯ ಮಾಧ್ಯಮದಲ್ಲಿ ಬಣ್ಣ ಹಾಕುವುದು |
| ೬ | ವ್ಯಾಟ್ ಬಣ್ಣಗಳು | ಹತ್ತಿನೂಲು ಮತ್ತು ಚಮಕಾ | ನೀರಿನಲ್ಲಿ ಕರಗಲಾರದ ಬಣ್ಣಗಳನ್ನು ಅಪಕರ್ಷಣಕಾರಿಗಳಿಂದ ನೂಲಿನ ಮೇಲೆ ಅಪಕರ್ಷಿಸಿ ನಂತರ ಉತ್ಕರ್ಷಣ ಕ್ರಿಯೆಯಿಂದ ಬಣ್ಣವನ್ನು ಮೊದಲಿನ ರೂಪಕ್ಕೆ ತರುವುದು |

## ೪.೨ ಸೀರೆ ವಿನ್ಯಾಸ: ವಡ್ಲು–ದಡಿ–ಸೆರಗು

ಮಾನವನ ಬದುಕಿನಲ್ಲಿ ಉಡುಗೆಗಳ ವಿಕಾಸ ತುಂಬಾ ಮಹತ್ವದ ಪರಿವರ್ತನೆಯನ್ನು ತಂದುಕೊಟ್ಟಿತು. ಮೊದಲು ದೇಹರಕ್ಷಣೆಗಾಗಿ, ನಗ್ನತೆಯಿಂದ ವಿಮುಕ್ತರಾಗಲು ಉಡುಗೆಗಳನ್ನು ಬಳಸಿದ ಮಾನವ ನಂತರದ ದಿನಮಾನಗಳಲ್ಲಿ ಸೌಂದರ್ಯಾಭಿರುಚಿಯ ದೃಷ್ಟಿಯಿಂದ ಉಡುಗೆಗಳ ವಿನ್ಯಾಸವನ್ನು ವಿಸ್ತರಿಸುತ್ತಾ ಬೆಳೆದನು. ಹಾಗೆಯೇ ತನ್ನ ಸುತ್ತಲಿನ ಕಚ್ಚಾಸಾಮಗ್ರಿಗಳ ಬಳಕೆ ನಂತರದಲ್ಲಿ ಬೇರೆ ಬೇರೆ ದುಬಾರಿ ಸಾಮಗ್ರಿಗಳಾದ ರೇಷ್ಮೇ ಮುಂತಾದ ವಸ್ತ್ರಗಳನ್ನು ಸಿದ್ಧಿಪಡಿಸುವಲ್ಲಿ ತೊಡಗಿದನು. ಜೊತೆಗೆ ವಸ್ತ್ರ ಕೌಶಲ್ಯದ ಕಲೆಗಾರಿಕೆಯನ್ನು ಮೈಗೂಡಿಸಿಕೊಂಡನು. ಈ ಹೊತ್ತು ಪ್ರಾದೇಶಿಕವಾಗಿ ರೋಮನ್ನರ ಉಡುಪು, ಯುರೋಪಿಯನ್ನರ ಉಡುಪು, ಭಾರತೀಯರ ಉಡುಪು ಹೀಗೆ ಆ ಭಾಗದ ವೈಶಿಷ್ಟ್ಯಗಳನ್ನು ಅನುಲಕ್ಷಿಸಿ ವರ್ಗೀಕರಣ ಮಾಡಲಾಗುತ್ತದೆ.

ಭಾರತದಲ್ಲಿ ದಕ್ಷಿಣ ಮತ್ತು ಮಧ್ಯಭಾರತದ ಸ್ತ್ರೀಯರ ಉಡುಗೆ ಸುಮಾರು ಐದೂವರೆ ಮೀಟರ್ ಉದ್ದ, ಒಂದುವರೆ ಮೀಟರ್ ಅಗಲವಿರುವ ಯಾವುದೆ ಹೊಲಿಗೆ ಇಲ್ಲದ ವಿವಿಧ ಬಣ್ಣಗಳು, ವಿನ್ಯಾಸಗಳು, ಕಲಾತ್ಮಕ ಕಸೂತಿ, ಅಂಚು ಮುಂತಾದವುಗಳನ್ನು ಒಳಗೊಂಡಿರುವ ವಿಶಿಷ್ಟ ಉಡುಪು ಸೀರೆ. ದೇಹದ ಅಂಗಾಂಗಗಳನ್ನು ಸಂಪೂರ್ಣವಾಗಿ ಮುಚ್ಚಿಬಿಡುವ ಸೀರೆಯು ಪ್ರಾಚೀನ ಉಡುಪಿನಿಂದ ಆಧುನಿಕ ಕಾಲವು ಪಡೆದಿರುವ ನೂತನ ಆವಿಷ್ಕಾರವಾಗಿದೆ. ಎಡಭಾಗದಿಂದ ಸೊಂಟದ ಭಾಗವನ್ನು ಬಳಸಿ ಬಲಬದಿಯಿಂದ ನೀರಿಗೆ ಹಿಡಿದು ಮತ್ತೇ ಉಳಿದ ಭಾಗವನ್ನು ಹಿಂಭಾಗದಿಂದ ಸುತ್ತುವರೆದು ಮುಂದೆ ತಂದು ಸುಮಾರು ಒಂದು ಮೀಟರ್ ಅಳತೆಯ ಭಾಗವನ್ನು ಎದೆಯ ಮೇಲಿಂದ ಹಾಯಿಸಿ ಎಡಭುಜದ ಮೇಲಿಂದ ಹಿಂದಕ್ಕೆ ಇಳಿಬಿಡುವಂತೆ ಸೀರೆಯನ್ನು ಉಡಲಾಗುತ್ತದೆ. ಸೆರಗನ್ನು ತಲೆಯ ಮೇಲೆ ಭುಜದ ಸುತ್ತ ಹೊದ್ದುಕೊಳ್ಳುವ ಕ್ರಮವೂ ಇದೆ. ಸೀರೆಯು ಒಂಭತ್ತರಿಂದ ಹದಿನಾರು ಮೊಳದವರೆಗೆ ಇರುವುದು. ಸಾಮಾನ್ಯವಾಗಿ ಲಂಗ ಮತ್ತು ರವಿಕೆಯೊಡನೆ ಸೀರೆಯನ್ನು ಉಡುತ್ತಾರೆ. ಎಂಬ ಉಲ್ಲೇಖ ಕರಕುಶಲಕಲೆಗಳು ವಿಶ್ವಕೋಶ ಸಂಪುಟ–೨ರಿಂದ ತಿಳಿದು ಬರುತ್ತದೆ.

ಆರಂಭದಲ್ಲಿ ಬಟ್ಟೆ, ವಸ್ತ್ರ ಎಂಬ ಅರ್ಥಗಳು ಮಾತ್ರ ಇದ್ದು ನಂತರದಲ್ಲಿ ಹೆಂಗಸರು ಉಡುವ ಬಟ್ಟೆ ಎಂಬ ವಿಶೇಷ ಅರ್ಥ ಬಂದಂತೆ ತೋರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕೃತಿಗಳು ಕೆಲವು ಮಾಹಿತಿಯನ್ನು ಒದಗಿಸುತ್ತವೆ.

"ಸಾಧುಗೆತ್ತು ಬಗೆಯಾದವನಾ ನೋಡಲ್ಪಟ್ಟಿದನಾದಮಾನು
ಮರಿಮಾನಸನಾಗದೇ ಮಾನದೋಳ್ ತಡೆದಾನವನಂದರ್ಪಂ"

(ಕವಿರಾಜಮಾರ್ಗ೧–೧೨೮)

"ಅಯ್ಯೋ ಎನಗುಡಲಿಲ್ಲೇನೂ ಮೊಂದುದಾ
ದಮ್ಮಕ್ಕಾದೊಡಂ ಸೀರೆಯಂ ಕೊಂಡಿಯಿಂ".

(ವಡ್ಡಾರಾಧನೆ ೨೨-೧೧)

"ವಿಲಸಿತ ದುಕೂಲ ವಸ್ತ್ರಂಗಳನಲ್ಲದೆ
ಪೇಯವು ಸೀರೆಗಳನ್ನುಟ್ಟಿವೆಯಂ'

(ಸುಕುಮಾರ ಚರಿತೆ ೧೦-೧೦೪)

"ಊರ ಸೀರೆಗೆ ಅಗಸ ತಡಬಡಗೊಂಬಂತೆ.........
ನಿಮ್ಮ ನಂಬುದ ಕಾರಣ ಕೆಟ್ಟನೇ ಕೆಟ್ಟನಯ್ಯ."

(ಅಕ್ಕಮಹಾದೇವಿ ವಚನ ೧೯-೩೧)

"ಬೆಸಕಯ್ಯ ಪೆಂಡಿರ ಮೊಲೆಗಳಂ ಸೀರೆಯಂಕಟ್ಟಿಸಿ
ಕೂಸುಗಳಂ ಮೊಲೆಯಂ ಬಲಿಯದೆ ಬೆಸೆಕೆಯ್ಯಗುಂ"

(ವಡ್ಡಾರಾಧನೆ ೧೨೦-೧೨)

"ತಳೆರ್ಗಳ ಸೀರೆಯುಟ್ಟು ಗುರುಗಂಜಿಯಹಾರವನಾಂತು"

(ಗಿರಿಜಾ ಕಲ್ಯಾಣಂ ೧-೧೨೩)

"ಹರಹರಾ ಎನುತಾಗ ಸೀರೆಯ ಸೆರಗ ಹರಿದಿತ್ತಳು ನೃಪಾಲಗೆ"

(ನಳಚರಿತೆ ೫-೬)

ಹೀಗೆ ವಸ್ತ್ರ, ಬಟ್ಟೆ ಎಂಬರ್ಥದ ಸೀರೆ ಹೆಂಗಸರು ಉಡುವ ಸಾಧನವಾಗಿ ಬಳಕೆಗೊಂಡಿರುವುದಕ್ಕೆ ಕಾವ್ಯಗಳಲ್ಲಿ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ.

ಭಾರತೀಯ ಇತಿಹಾಸದಲ್ಲಿ ಸೀರೆಗಳಿಗೆ ಪ್ರಾಚೀನ ಪರಂಪರೆಯಿದೆ ಹೀಗಾಗಿ ಬಹು ಸಂಸ್ಕೃತಿಯನ್ನು ಹೊಂದಿರುವ ಹಲವಾರು ಸಮುದಾಯಗಳು ಸೀರೆ ಕುರಿತಾಗಿ ಅನೇಕ ಆಚರಣೆ-ನಂಬಿಕೆಗಳನ್ನು ರೂಢಿಸಿಕೊಂಡು ಬಂದಿರುತ್ತಾನೆ. ವಿಶೇಷವಾಗಿ ಗ್ರಾಮೀಣ ಉಡುಗೆ ತೊಡುಗೆಗಳು ಎಂಬ ಗ್ರಂಥದಲ್ಲಿ (ಪುಟಸಂಖ್ಯೆ ೪-೫) ಡಾ. ಮಂದಾಕಿನಿ ಪುರೋಹಿತರು ಸೀರೆಗಳ ಬಳಕೆ ಹಾಗೂ ಅವುಗಳ ಹಿಂದಿರುವ ಸಾಂಸ್ಕೃತಿಕ ಸಂಗತಿಗಳನ್ನು ಈ ಕೆಳಗಿನಂತೆ ವಿವರಿಸುತ್ತಾರೆ.

**ಮೈನೆರೆತ ಸೀರೆ**

ಹುಡುಗಿ ಮೈನೆರೆತದ್ದು ತಿಳಿದ ತಕ್ಷಣ ಅವಳನ್ನು ಮುಟ್ಟಿ ಅರಿಷಿಣ, ಕೊಬ್ಬರಿಎಣ್ಣೆ ಮೈತುಂಬಾ ಹಚ್ಚಿ ಎರೆದು ಸೀರೆ ಉಡಿಸಿ ಆರತಿ ಮಾಡುವರು. ದಿನನಿತ್ಯ ಬಂಧು-ಬಳಗದವರು ಸಿಹಿ ಊಟ ಮಾಡಿಸಿ ಸೀರೆ ಕುಪ್ಪಸ ಕೊಟ್ಟು ಆರತಿ ಮಾಡುವರು. ಇಪ್ಪತ್ತೊಂದು ದಿನ ಹುಡುಗಿಯನ್ನು ಮಂಟಪದಲ್ಲಿ ಕುಳ್ಳಿರಿಸಿ ಅಲಂಕರಿಸಿ ಆರತಿ ಮಾಡುವರು. ಅವಳನ್ನು ಮೊದಲು ಮುಟ್ಟು ಎರೆದಾಕಿಗೆ ಒಂದು ಬಟ್ಟೆಗೆ ಎರಡು ಸೀರೆಗಳನ್ನು ತಂದು ಆಹೇರ್(ಮುಯ್ಯಿ) ಮಾಡುವರು. ಹುಡುಗಿಗೆ ಜರದಂಚಿನ ಹಸಿರು ಸೀರೆ, ಹಸಿರು ಕುಪ್ಪಸ ತೊಡಿಸುವರು. ಹಸಿರು ಬಳೆ ಇಡಿಸುವರು.

**ಮದುವೆ ಸೀರೆಗಳು**

ಹುಡುಗಿ ವರನಿಗೆ ಒಪ್ಪಿಗೆಯಾದಲ್ಲಿ ಅವಳಿಗೆ ಹಣ್ಣು ಉಡಿ ತುಂಬಿ ಬರುತ್ತಾರೆ. ನಂತರ ಮದುವೆಗಿಂತ ಮೊದಲು ಬರುವ ಪಂಚಮಿ ಹಬ್ಬಕ್ಕೆ ಸೀರೆ, ಖಣವನ್ನು ಕೊಟ್ಟು ಆರತಿ ಮಾಡುವರು ಈ ಕಾರ್ಯಕ್ಕೆ "ಉಂಡಿ ಸೀರೆ" ಕಾರ್ಯ ಎನ್ನುತ್ತಾರೆ. ಗೌರಿಹುಣ್ಣಿಮೆಗೆ ಬಂದರೆ ಹೊಸ ಸೀರೆ ಕುಪ್ಪಸ ಹೂವಿನ ದಂಡಿ, ಸಕ್ಕರೆ ಆರತಿಗಳನ್ನು ಕೊಟ್ಟು ಆರತಿಯ ಮಾಡಿ ಬರುತ್ತಾರೆ.

**ಸಕ್ಕರೆ ಸೀರೆ**

ನಮ್ಮ ಕಾಲಕ್ಕೆ ಹಣ್ಣಿಡುವಾಗ ನಾಲ್ಕು ವರಾಹ ಎಂದರೆ ಹದಿನಾರು ರೂಪಾಯಿ ಹಣೀಗೆ ಹಚ್ಚಿ ಉಡ್ಯಾಗ ಹಾಕಿ ಒಂದು ಚೀಲ ಸಕ್ಕರೆ ಹಂಚಿದರು. ಹದಿನಾರು ಮೊಳದ ದೊಡ್ಡ ಚೌಕಳಿಸೀರೆ, ಕುಬುಸದ ಖಣ ಕಾಲಿಗೆ ಪಂಚೇರಿನ ತೋಡೆ ಒಂದು ಸೇರಿನ ಗೆಜ್ಜೆ ಪಟ್ಟಿ, ಕಿವಿನಾವು ಹಾಕಿದ್ರು ಎಂದು ಐವತ್ತೈದು ವರ್ಷದ ಹಿರಿಯ ಮುತ್ತೈದೆ ಪಾರತೆವ್ವ ನಾಲಿಗೇರ ನೆನಪಿಸಿಕೊಳ್ಳುತ್ತಾರೆ. ಇದು ಗಂಡಿನವರು ಮದುವೆಗೆಂದು ಕೊಡುವ ಮೊದಲ ಸೀರೆಯಾಗಿರುತ್ತದೆ.

**ಅರಿಷಿಣ ಸೀರೆ**

ಮದುವೆಯ ಕಾರ್ಯದಲ್ಲಿ ಬಹಳ ಮುಖ್ಯವಾದ ಸೀರೆ, ಅರಿಷಿಣ ಸೀರೆಯಾಗಿರುತ್ತದೆ. ಇದು ಹಳದಿ ಬಣ್ಣದ್ದಾಗಿದ್ದು, ಇದು ಈಗಿನ ಪ್ರಿಂಟೆಡ್ ಪತ್ತಲವಾಗಿರಬಹುದು.

**ಮೇಲ್‌ಮುಸುಗಿನ ಸೀರೆ**

ಮದುವೆ ಮಹೂರ್ತ ಸಮೀಪಿಸುತ್ತಿದ್ದಂತೆ ಮದುಮಗಳಿಗೆ ಮೇಲ್‌ಮುಸುಗಿನ ಸೀರೆಯನ್ನು ಹೆಗಲ ಮೇಲೆ ಹೊದಿಸುವರು. ಮೇಲ್ಮುಸುಗು ಎನ್ನುತ್ತರಾದರೂ ಯಾರೂ ಮುಖಕ್ಕೆ ಮುಸುಗು ಹಾಕಿಕೊಳ್ಳುವುದಿಲ್ಲ. ಇದನ್ನು ಸೋದರಮಾವನೇ ತರುತ್ತಾನೆ.

**ಮಡಿಸೀರೆ**

"ಮದುವೆ ಅಕ್ಕಿಕಾಳು ಬಿದ್ದನಂತರ ದೊಡ್ಡಸೀರೆ ಅಂದರೆ ಬೆಲೆಬಾಳುವ ರೇಷ್ಮೆ ಜರದಂಚಿನ ಸೀರೆಯನ್ನು ಮದುಮಗಳಿಗೆ ಉಡಿಸುತ್ತಾರೆ.

**ದೊಡ್ಡಸೀರೆ**

ಮತ್ತೊಂದು ದೊಡ್ಡಸೀರೆಯನ್ನು ಮದುಮಗಳಿಗೆ ಉಡಿಸಿ ಒಂಭತ್ತು ಖಣಗಳನ್ನು ಉಡಿ ತುಂಬುವರು.

**ಬೀಗತೀಸೀರೆ**

ಮದುಮಗಳ ತಾಯಿಗೆ 'ಬೀಗತಿ'ಸೀರೆ ಕೊಡುವರು. ಇದಕ್ಕೆ ಮುಯ್ಯದಸೀರೆ ಎಂದು ಹೆಸರು. ಇದು ಇಂತಹುದ್ದೇ ಬಣ್ಣದ್ದಿರಬೇಕೆಂಬ ನಿಯಮವಿಲ್ಲ.

**ಶ್ಯಾವಿಗೆ ಸೀರೆ**

ಗಂಡಿನವರು ಸೊಸೆಯನ್ನು ಮನೆತುಂಬಿಸಿಕೊಂಡು ಮತ್ತೆ ತವರು ಮನೆಗೆ ಕಳುಹಿಸುವಾಗ ಹೊಸ ಸೀರೆ ಉಡಿಸಿ ಉಡಕ್ಕಿ ಹಾಕಿ ಕಳಿಸಿಕೊಡುವರು. ಊರಹೆಂಗಸರು ಉಡಿ ತುಂಬಿ ಕಳಿಸಿಕೊಡುವರು. ಗಂಡಿನವರು ಕೊಡುವ ಈ ಸೀರೆಗೆ ಶ್ಯಾವಿಗೆ ಸೀರೆ ಎನ್ನುವರು. ಇದು ಮದುಮಕ್ಕಳ ಶುಭರಾತ್ರಿಯ ಸೀರೆಯಾಗಿರುತ್ತದೆ. ಇದಕ್ಕೆ ಪ್ರಸ್ತದ ಸೀರೆ ಎಂದು ಹೇಳುವರು. ಮದುಮಗಳು ಶ್ಯಾವಿಗೆಸೀರೆಯನ್ನುಟ್ಟು ತವರಿಗೆ ಬಂದಾಗ "ಶ್ಯಾವಿಗೆ ಸೀರೆ" ಚೊಲೊದ ತಂದೀಯಾ ಎಂದು ಹೆಂಗಸರು ಹಾಸ್ಯ ಮಾಡಿ ಛೇಡಿಸುವರು. ಶ್ಯಾವಿಗೆ ಬಸಿದು ಪಾಯಸದೂಟ ಉಣಿಸಿ ಮದುಮಗಳಿಗೆ ಈ ಸೀರೆಯನ್ನು ಕೊಟ್ಟಿರುತ್ತಾರೆ. ಪಂಚಮಿ ಹಬ್ಬಕ್ಕೆ ಕರೀ ಚಂದ್ರಕಾಳಿ ಸೀರೆಯನ್ನು ತವರು ಮನೆಯವರು ಕೊಡುತ್ತಾರೆ.

**ಕುಬುಸದ ಸೀರೆ (ಬಸುರಿ ಸೀರೆ)**

ಮದುಮಗಳು ಹೊಸ ಸಂತೋಷದಲ್ಲಿ ಗಂಡನ ಮನೆಗೆ ಹೋಗಿ ಪ್ರಥಮ ಬಾರಿಗೆ ಗರ್ಭಿಣಿಯಾದಾಗ ಅವಳಿಗೆ ತವರಿನವರು ಬಗೆ ಬಗೆಯ ತಿಂಡಿ ತಿನಿಸುಗಳನ್ನು ಮಾಡಿಕೊಂಡು ಹೋಗಿ ಕೊಟ್ಟು ಬರುವರು ಮತ್ತು ಆರನೆಯ ತಿಂಗಳಲ್ಲಿ ಹಸಿರು ಸೀರೆ ಕುಪ್ಪಸದ ಖಣವನ್ನು ಕೊಟ್ಟು ಆರತಿ ಮಾಡುವರು. ಬಂಧು ಬಳಗದವರಿಗೆ ಸಿಹಿ ಊಟ ಮಾಡಿಸುವರು. ಈ ಸಂದರ್ಭದಲ್ಲಿ ಗಂಡನಿಗೂ ಸಹ ಹೊಸ ಬಟ್ಟೆಗಳನ್ನು ಕೆಲವರು ಬಂಗಾರವನ್ನು ಕೊಡುವುದುಂಟು ಈ ಪದ್ದತಿಗೆ ಹೂವು ಮುಡಿಸುವ ಪದ್ದತಿ, ಸೀಮಂತ ಕಾರ್ಯವೆಂತಲೂ ಕರೆಯುತ್ತಾರೆ.

ಹೀಗೆ ಮಾನವನ ದೇಹದ ಅಂಗಾಂಗಳು ವಿನ್ಯಾಸದಂತೆ ಇಳಕಲ್ಲ ಸೀರೆಯ ವಿನ್ಯಾಸದಲ್ಲಿಯೂ ಹಲವಾರು ಭಾಗಗಳು ಕಂಡುಬರುತ್ತವೆ. ಪ್ರಾಯಶಃ ಈ ಭಾಗವನ್ನು ಇನ್ನಿತರೆ ಕೈಮಗ್ಗದ ಸೀರೆಗಳಲ್ಲಿಯೂ ಕಾಣಬಹುದಾಗಿದೆ. ದಡಿ, ವಡ್ಲು, ಸೆರಗು ಈ ಭಾಗಗಳನ್ನು ವಿನ್ಯಾಸ ಹಾಗೂ ಅಳತೆಯನ್ನು ಅನುಲಕ್ಷಿಸಿ ಸೀರೆಗಳ ನಮೂನೆಯನ್ನು ಗುರುತಿಸುತ್ತಾರೆ. ಇದರರ್ಥ ಸೀರೆಗಳ ನಮೂನೆಯ ವೈವಿಧ್ಯತೆಗೆ ಈ ಸೀರೆಯಲ್ಲಿ ಅಳವಡಿಸಿರುವ ದಡಿ, ವಡ್ಲು, ಸೆರಗುಗಳಲ್ಲಿಯೂ ವೈಶಿಷ್ಟವೇ ಕಾರಣವೆಂಬುದು ಗಮನಿಸಬೇಕಾದ ಸಂಗತಿ. ಒಟ್ಟಿನಲ್ಲಿ ಸಾವಾರಿ(೬ಮೀಟರ್), ಆಠ್‌ವಾರಿ (೮ಮೀಟರ್) ನೌವಾರಿ (೯ಮೀಟರ್) ಹೀಗೆ ಎರಡು ಮೂರು ಪ್ರಕಾರದ ಅಳತೆಗಳಿರುತ್ತವೆ. ತೋಪ ತೆನಿ, ಸಾದಾ, ಸುಳುವು ಹಾಗೂ ಲತಗುಣಿ ಎಂದು ನಾಲ್ಕು ರೀತಿಯ ಸುಳುಹುಗಳು ಸೀರೆಯ ಸೆರಗಿನಲ್ಲಿದ್ದರೆ ದಡಿಯಲ್ಲಿ ಚಿಕ್ಕಿ, ಪರಾಸಪೇಟ (ಪಟ್ಟಿ) ಬುಗಡಿ ಪರಾಸಪೇಟ (ಪಟ್ಟಿ) ಗೊಡ್ಡಿ ಪರಾಸಪೇಟ(ಪಟ್ಟಿ) ನಮೂನೆಗಳಿರುತ್ತವೆ." [೩]

## ೪.೨.೧ ಸೀರೆಯ ವಡ್ಲು ವಿನ್ಯಾಸ

ವಡ್ಲು ಎಂದರೆ ಹೊಟ್ಟೆ ಎಂದು ಅರ್ಥ. ಈಗಲೂ ಗ್ರಾಮೀಣ ಜನರು "ನಿನ್ನ ವಡ್ಲಿಗೆ ಎಷ್ಟಾದರೂ ಸಾಲದು" ಎಂದು ಬೈಯುವದನ್ನು ಕೇಳುತ್ತೇವೆ. ಹೀಗಾಗಿ ವಡ್ಲು ಎಂದರೆ ಹೊಟ್ಟೆ ಗರ್ಭ ಎಂದರ್ಥ. ಸೀರೆಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಸೆರಗು ಸುತ್ತಲಿನ ದಡಿಯ ಒಳಗಿನ ವಿಶಾಲವಾದ ಪ್ರದೇಶವೇ ವಡ್ಲು ಆಗುತ್ತದೆ. ಸೀರೆಯ ಬಹುಮುಖ್ಯ ಭಾಗವಾದ ಇದು ಆಯ್ಕೆಯಲ್ಲಿ ಪ್ರಾತಿನಿಧಿಕ ಸ್ಥಾನವನ್ನು ಹೊಂದಿರುತ್ತದೆ. ಇಳಕಲ್ಲಸೀರೆಯ ವಿವಿಧ ವಿನ್ಯಾಸಗಳಲ್ಲಿ ವಡ್ಲುದ ವಿನ್ಯಾಸಗಳು ಆಕರ್ಷಣೀಯವಾಗಿವೆ. ಇಲ್ಲಿಯ ನೇಕಾರರು ವಡ್ಲುವನ್ನು ಕುರಿತು ತಮ್ಮದೇ ಆದ ಸ್ಥಳೀಯ ಪರಿಭಾಷೆಯಲ್ಲಿ ಕರೆಯುತ್ತಾರೆ. ಎಲ್ಲಾ ವಿನ್ಯಾಸಗಳು ಜ್ಯಾಮಿತಿ ಆಕಾರಗಳನ್ನು ಹೊಂದಿದ್ದು ವಿನ್ಯಾಸ ರಚನೆಯನ್ನು ಸಂಪೂರ್ಣವಾಗಿ ಕೈಯಿಂದಲೇ ಬಣ್ಣದ ನೂಲಿಗೆ ಕಂಡಿಕೆ (ಲಾಳಿ)ಗಳನ್ನು

ಕ್ರಮಬದ್ಧವಾಗಿ ಹಾಸುಗೆ ಅಡ್ಡಲಾಗಿ ಹಾಯಿಸುತ್ತ ಸೃಷ್ಟಿಸಿರುತ್ತಾರೆ. ಸೀರೆಯ ಹಾಸನ್ನು ತಯಾರಿಸುವಾಗಲೇ ಹಣಗೆ ಹಚ್ಚುವುದರ ಮುಖಾಂತರ ವಿವಿಧ ಬಣ್ಣದ ನೂಲನ್ನು ಬೇಕಾದ ಹಂತದಲ್ಲಿ ಕರಿನೂಲಿನ ಜೊತೆಗೆ ಬೇಕಾಗುವ ಬಣ್ಣದ ಚಮಕ ಬಳಸಿ ಕ್ರಮಬದ್ಧವಾಗಿ ಅಂತರವನ್ನು ಇಟ್ಟು ವಿನ್ಯಾಸ ರಚನೆ ಮಾಡಲಾಗಿರುತ್ತದೆ. ಕಂಡಿಕೆಯನ್ನು ಸೀರೆಯ ಒಂದು ಬದಿಯಿಂದ (ಅಂಚನ್ನು ಹೊರತುಪಡಿಸಿ) ಹಾಸುಗೆ ಅಡ್ಡಲಾಗಿ ಇನ್ನೊಂದು ಬದಿಗೆ ಕೈಯಿಂದಲೇ ಹಾಯಿಸುತ್ತಾ ಪ್ರತಿ ಎರಡು, ನಾಲ್ಕು ಅಥವಾ ಬೇಕಾದ ನೇಯ್ಗೆಯ ನಂತರ ಕಂಡಿಕೆಗಳನ್ನು ಬದಲಾಯಿಸುತ್ತಾ ವಿನ್ಯಾಸವನ್ನು ರಚಿಸುವ ಕ್ರಿಯೆ ಕಠಿಣ ಕೆಲಸವಾಗಿದ್ದು, ಸಾಕಷ್ಟು ತಾಳ್ಮೆ ಹಾಗೂ ಸಮಯವನ್ನು ತೆಗೆದುಕೊಳ್ಳುತ್ತದೆ. ವಡ್ಲದ ವಿನ್ಯಾಸ ರಚನೆಯಲ್ಲಿ ನೇಕಾರರ ನೈಪುಣ್ಯತೆ ಪ್ರಮುಖ ಪಾತ್ರವಹಿಸುತ್ತದೆ. ಇಲ್ಲಿ ಅವನಿಗೆ ಕೌಶಲ್ಯವನ್ನು ದರ್ಶಿಸಲು ಸಾಕಷ್ಟು ಅವಕಾಶಗಳು ಉಂಟು[೪] ವಡ್ಲಿನ ಆಧಾರದ ಮೇಲೆ ಇಳಕಲ್ಲ ಸೀರೆಗಳನ್ನು ಪ್ಲೇನ್‌ಸೀರೆಗಳು (ಸಾದಾಸೀರೆಗಳು) ಮತ್ತು ಡಿಜೈನ್ ಸೀರೆಗಳು (ವಿನ್ಯಾಸಸೀರೆಗಳು) ಎಂದು ಎರಡು ಪ್ರಕಾರದಲ್ಲಿ ಗುರುತಿಸುತ್ತಾರೆ.

ಪ್ರಖರ ಬಣ್ಣಗಳನ್ನು ಹೊಂದಿರುವ ಸಾದಾ ಇಳಕಲ್ಲ ಸೀರೆಗಳಿಗೆ ರೇಷ್ಮೆಸೀರೆಗಳಷ್ಟೇ ಮಹತ್ವವಿದೆ. ಹಲವಾರು ಬಣ್ಣಗಳಲ್ಲಿ ತಯಾರಿಸುವ ಶುದ್ಧ ರೇಷ್ಮೆ ಸೀರೆಗಳಲ್ಲಿ 'ಹಾಸು' ಪ್ರಮುಖ ಬಣ್ಣವನ್ನು ಅವಲಂಭಿಸಿದರೆ 'ಹೊಕ್ಕು' ಕರಿನೂಲನ್ನು ಹೊಂದಿರುತ್ತದೆ. ಹೀಗಾಗಿ ಆಕರ್ಷಣೀಯ ದೃಷ್ಟಿಯಿಂದ ಇವುಗಳ ವಿನ್ಯಾಸ ಮನೋಹರವಾಗಿದೆ.

ಇನ್ನು ವಡ್ಲುದಲ್ಲಿ ಜ್ಯಾಮಿತಿ ಆಕಾರದ ಬಳಕೆ ವಿನೂತನವಾದದ್ದು ಇವುಗಳಲ್ಲಿ ಪಟ್ಟಿ ಅಥವಾ ಗೆರೆವಿನ್ಯಾಸ, ಚೌಕೋನ ವಿನ್ಯಾಸ, ದ್ವಿಚೌಕೋನವಿನ್ಯಾಸ, ಆಯತಾಕಾರದ ವಿನ್ಯಾಸ, ಚಿಕ್ಕಿ ವಿನ್ಯಾಸದ ಸೀರೆಗಳಿವೆ. ಈ ವಿನ್ಯಾಸದ ಸೀರೆಗಳನ್ನು ಸ್ಥಳೀಯರು ಅವರದೇ ಆದ ಹೆಸರಿನಿಂದ ಗುರುತಿಸಿದ್ದು ಅವುಗಳನ್ನು ರಾಗಾವಳಿ ಢವಳ, ಪರಾಸ, ಪುಟಾಣಿ, ಕಡ್ಡಿ, ಪಂಚರಂಗಿ, ಎಳ್ಳು ಹೂಕಡ್ಡಿ, ಸಾದಾಕೊಂಡಿ, ರಾಸ್ತ, ಪತಂಗ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಬಹುಶಃ ಈ ಹೆಸರುಗಳನ್ನು ಗಮನಿಸಿದರೆ ದೇಶೀಯ ರಾಗ, ಲಯ, ಹಾಗೂ ತಮ್ಮ ಸುತ್ತಲಿನ ಸಸ್ಯ ಸಂಜೀವಿನಿ ಹೆಸರುಗಳನ್ನು ಕೊಟ್ಟಿರುವಂತೆ ಭಾಸವಾಗುತ್ತದೆ. ಇಳಕಲ್ಲ ಸೀರೆಯ ವಡ್ಲುದ ವಿವಿಧ ವಿನ್ಯಾಸದಲ್ಲಿ ಬಳಕೆಯಾಗುವ ಹಾಸು ಮತ್ತು ಹೊಕ್ಕಿನ ಎಳೆಗಳನ್ನು ಸಾಮಾನ್ಯವಾಗಿ ಈ ಕೆಳಗಿನಂತೆ ವಿನ್ಯಾಸಗೊಳಿಸುತ್ತಾರೆ.

| ಕ್ರ.ಸಂ. | ವಿನ್ಯಾಸ | ಹಾಸು | ಹೊಕ್ಕು |
| --- | --- | --- | --- |
| ೧ | ರಾಗಾವಳಿ | ೧೨ ಎಳೆ ಹಸಿರುಗುಲಾಬಿ,<br>ಚಮಕಾ, ಕರಿನೂಲು | ೧೨ ಎಳೆ ಕರಿನೂಲು |
| ೨ | ಥಪಳ | ೨೨ ಎಳೆ ಕರಿಚಮಕಾ,<br>೨ ಎಳೆ ಬಿಳಿಚಮಕಾ<br>೨ ಎಳೆ ಗುಲಾಬಿ ಚಮಕಾ,<br>೪ ಎಳೆ ಬಿಳಿಚಮಕಾ | ೨೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ<br>೨ ಎಳೆ ಕರಿ<br>೪ ಎಳೆ ಬಿಳಿಚಮಕಾ |
| ೩ | ಡಬಲ್ ಚೌಕಾನಿ | ೪ ಎಳೆ ಹಸಿರುಚಮಕಾ,<br>೨ ಎಳೆ ಹಳದಿ ಚಮಕಾ,<br>೨ ಎಳೆ ಗುಲಾಬಿ ಚಮಕಾ<br>೨ ಎಳೆ ಹಳದಿ ಚಮಕಾ | ೧೦ ಎಳೆ ಕರಿನೂಲು,<br>೨ ಎಳೆ ಹಳದಿಚಮಕಾ,<br>೨ ಎಳೆ ಕರಿನೂಲು<br>೨ ಎಳೆ ಹಳದಿಚಮಕಾ |
| ೪ | ಪುಟಾಣಿ | ೧೦ ಎಳೆ ಹಸಿರು ಚಮಕಾ<br>೨ ಎಳೆ ಬಿಳಿಚಮಕಾ<br>೨ ಎಳೆ ಗುಲಾಬಿ ಚಮಕಾ<br>೨ ಎಳೆ ಬಿಳಿ ಚಮಕಾ<br>೨ ಎಳೆ ಗುಲಾಬಿಚಮಕಾ<br>೨ ಎಳೆ ಬಿಳಿ ಚಮಕಾ<br>೨ ಎಳೆ ಗುಲಾಬಿ ಚಮಕಾ<br>೨ ಎಳೆ ಬಿಳಿ ಚಮಕಾ | ೨೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ<br>೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ<br>೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ<br>೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ |
| ೫ | ಕಡ್ಡಿ | ೪ ಎಳೆ ಕರಿಚಮಕಾ<br>೨ ಎಳೆ ಹಸಿರುಚಮಕಾ | ೮ ಎಳೆ ಕರಿನೂಲು<br>೨ ಎಳೆ ಹಸಿರುನೂಲು |
| ೬ | ಪಂಚರಂಗಿ ಕಡ್ಡಿ | ೪ ಎಳೆ ಕರಿನೂಲು<br>೨ ಎಳೆ ಕಪಿಲಿಚಮಕಾ<br>೪ ಎಳೆ ಕರಿನೂಲು<br>೨ ಎಳೆ ಹಸಿರುಚಮಕಾ<br>೨ ಎಳೆ ಆಸ್ಮಲಿ ಚಮಕಾ | ೬ ಎಳೆ ಕರಿನೂಲು<br>೨ ಎಳೆ ಕಪಿಲಿಚಮಕಾ<br>೬ ಎಳೆ ಕರಿನೂಲು<br>೨ ಎಳೆ ಹಸಿರುಚಮಕಾ<br>೪ ಎಳೆ ಕರಿನೂಲು |

| | | | |
|---|---|---|---|
| ೭ | ಎಳ್ಳ ಹೂ ಕಡ್ಡಿ | ೬ ಎಳೆ ಕರಿಚಮಕಾ<br>೨ ಎಳೆ ಗುಲಾಬಿಚಮಕಾ<br>೨ ಎಳೆ ಕರಿಚಮಕಾ<br>೨ ಎಳೆ ಬಿಳಿ ಚಮಕಾ | ೮ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ |
| ೮ | ಸಾದಾಕೊಂಡಿ ಚಿಕ್ಕಿ | ೨ ಎಳೆ ಕಪಿಲಿ/ ಬಿಳಿ ಚಮಕಾ<br>೨ ಎಳೆ ಹಸಿರುಚಮಕಾ | ೨ ಎಳೆ ಕಪಿಲಿ/ಬಿಳಿ ಚಮಕಾ |
| ೯ | ಎಳ್ಳಹೂಕೊಂಡಿಚಿಕ್ಕಿ | ೨ ಎಳೆಅಸ್ಮನಿಚಮಕಾ<br>೨ ಎಳೆ ಗುಲಾಬಿಚಮಕಾ,<br>೨ ಎಳೆ ಅಸ್ಮನಿಚಮಕಾ<br>೨ ಎಳೆ ಗುಲಾಬಿಚಮಕಾ<br>೨ ಎಳೆ ಬಿಳಿಚಮಕಾ | ೪ ಎಳೆ ಕರಿನೂಲು<br>೨ ಎಳೆ ಗುಲಾಬಿಚಮಕಾ<br>೪ ಎಳೆ ಕರಿನೂಲು<br>೨ ಎಳೆ ಗುಲಾಬಿಚಮಕಾ<br>೪ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ |
| ೧೦ | ರಾಸ್ತಾ | ೪ ಎಳೆ ಕರಿಚಮಕಾ<br>೨ ಎಳೆ ಹಸಿರುಚಮಕಾ<br>೨ ಎಳೆ ಕಪಿಲಿ/ ಬಿಳಿ<br>೨ ಎಳೆ ಹಸಿರು | ಕರಿನೂಲು |
| ೧೧ | ಪತಂಗ ಶರ್ಟಿಂಗ್ | ೧೨ ಎಳೆ ಗುಲಾಬಿಚಮಕಾ<br>೨ ಎಳೆ ಬಿಳಿಚಮಕಾ<br>೧೨ ಎಳೆ ಗುಲಾಬಿಚಮಕಾ<br>೨ ಎಳೆ ಬಿಳಿಚಮಕಾ<br>೨ ಎಳೆ ಹಳದಿಚಮಕಾ<br>೨ ಎಳೆ ಹಸಿರುಚಮಕಾ<br>೨ ಎಳೆ ಹಳದಿಚಮಕಾ<br>೨ ಎಳೆ ಹಸಿರುಚಮಕಾ<br>೨ ಎಳೆ ಹಳದಿಚಮಕಾ<br>೨ ಎಳೆ ಹಸಿರುಚಮಕಾ<br>೨ ಎಳೆ ಬಿಳಿಚಮಕಾ | ೧೮ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ<br>೧೮ ಎಳೆಕರಿನೂಲು<br>೪ ಎಳೆ ಬಿಳಿಚಮಕಾ<br>೪ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ<br>೪ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ<br>೪ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ |

| | | | |
|---|---|---|---|
| ೧೨ | ಛಾಯ ಶರ್ಟಿಂಗ್ | ೨ ಎಳೆ ಕರಿ ಚಮಕಾ | ೨ ಎಳೆ ಕರಿ ನೂಲು |
| | | ೨ ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೨ ಎಳೆ ಕರಿನೂಲು |
| | | ೨ ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೪ ಎಳೆ ಕರಿನೂಲು |
| | | ೪ ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೬ ಎಳೆ ಕರಿನೂಲು |
| | | ೬ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೮ ಎಳೆ ಕರಿನೂಲು |
| | | ೮ ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೨ ಎಳೆ ಕರಿ ನೂಲು |
| | | ೬ ಎಳೆ ಫಿರೋಜಿಚಮಕಾ | ೪ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೨ ಎಳೆ ಕರಿನೂಲು |
| | | ೪ ಎಳೆ ಫಿರೋಜಿಚಮಕಾ | ೬ ಎಳೆ ಪಿರೋಜಿಚಮಕಾ |
| | | ೨ ಎಳೆ ಕರಿಚಮಕಾ | ೨ ಎಳೆ ಕರಿ ನೂಲು |
| | | ೨ ಎಳೆ ಫಿರೋಜಿಚಮಕಾ | ೮ ಎಳೆ ಪಿರೋಜಿಚಮಕಾ |
| | | ೪ ಎಳೆ ಕರಿಚಮಕಾ | ೨ ಎಳೆ ಕರಿನೂಲು |
| | | ೨ ಎಳೆ ಫಿರೋಜಿಚಮಕಾ | ೬ ಎಳೆ ಪಿರೋಜಿಚಮಕಾ |
| | | ೬ ಎಳೆ ಕರಿಚಮಕಾ | ೨ ಎಳೆ ಕರಿನೂಲು |
| | | ೨ ಎಳೆ ಫಿರೋಜಿಚಮಕಾ | ೪ ಎಳೆ ಪಿರೋಜಿಚಮಕಾ |
| | | ೮ ಎಳೆ ಕರಿಚಮಕಾ | ೨ ಎಳೆ ಕರಿನೂಲು |
| | | ೨ ಎಳೆ ಫಿರೋಜಿಚಮಕಾ | ೨ ಎಳೆ ಪಿರೋಜಿಚಮಕಾ |
| ೧೩ | ಮಧುಪ | ೪ ಎಳೆ ಜಾಂಬಳಾಚಮಕ | ೮ ಎಳೆ ಕರಿನೂಲು |
| | | ೪ ಎಳೆ ರಾಮ ಚಮಕಾ | ೪ ಎಳೆ ಬಿಳಿಚಮಕಾ |
| | | ೪ ಎಳೆ ಜಾಂಬಳಾಚಮಕ | ೮ ಎಳೆ ಕರಿನೂಲು |
| | | ೪ ಎಳೆ ರಾಮಚಮಕಾ | ೪ ಎಳೆ ಗುಲಾಬಿಚಮಕಾ |
| | | ೪ ಎಳೆ ಜಾಂಬಳಾಚಮಕ | ೮ ಎಳೆ ಕರಿನೂಲು |

| | | | |
|---|---|---|---|
| | | ೪ ಎಳೆ ರಾಮಚಮಕಾ | ೪ ಎಳೆ ಬಿಳಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಗುಲಾಬಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಗುಲಾಬಿಚಮಕಾ<br>೮ ಎಳೆ ಕರಿನೂಲು<br>೪ಎಳೆ ಗುಲಾಬಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಗುಲಾಬಿಚಮಕಾ<br>೮ಎಳೆ ಕರಿನೂಲು<br>೪ ಎಳೆ ಗುಲಾಬಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ<br>೮ ಎಳೆ ಕರಿನೂಲು<br>೪ ಎಳೆ ಗುಲಾಬಿಚಮಕಾ |
| ೧೪ | ಮಧುಪಾ<br>ರಾಗಾವಳಿ | ೧೪ ಎಳೆ ಹಸಿರು/ಗುಲಾಬಿ/<br>ಜಾಂಬಾಳಿ ಚಮಕಾ<br>೧ ಎಳೆ ಬಿಳಿ ಚಮಕಾ/ಬಿಳಿಜರಿ<br>೨ ಎಳೆ ಹಸಿರು/ಗುಲಾಬಿ/.<br>ಜಾಂಬಾಳಾ ಚಮಕಾ<br>೧ ಎಳೆ ಬಿಳಿಚಮಕಾ/ ಬಿಳಿಜರಿ | ೧ ೮ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ/ಜರಿ |
| ೧೫ | ಮಧುಪ್<br>ಕಡ್ಡಿವಡ್ಲು | | |
| ೧೬ | ಅಯ್ಯಂಗಾರ್<br>ಚಕ್ಸ್ | ೬೪ ಎಳೆ ಜಾಂಬಾಳಚಮಕಾ<br>೪ ಎಳೆ ಕೇಸರಿಚಮಕಾ<br>೪ ಎಳೆ ಬಿಳಿಚಮಕಾ | ೬೪ ಎಳೆ ಕರಿನೂಲು<br>೪ ಎಳೆ ಕೇಸರಿಚಮಕಾ<br>೬ ಎಳೆ ಕರಿನೂಲು<br>೪ ಎಳೆ ಬಿಳಿಚಮಕಾ |

| | | | |
|---|---|---|---|
| | | ೬೪ ಎಳೆ ಕರಿನೂಲು<br>೪ ಎಳೆ ಕೇಸರಿಚಮಕಾ | |
| ೧೭ | ಪಂಚರಂಗಿರಾಸ್ತಾ | ೨ ಎಳೆ ಫಿರೋಜಿಚಮಕಾ<br>೨ ಎಳೆ ಕರಿ ಚಮಕಾ/ನೂಲು<br>೨ ಎಳೆ ಪರಾಸಚಮಕಾ<br>೨ ಎಳೆ ಕರಿಚಮಕಾ/ ನೂಲು | ಕರಿನೂಲು |
| ೧೮ | ಜಬ್ರಾ | ೧೦ ಎಳೆ ಕರಿಚಮಕಾ<br>೧೦ ಎಳೆ ಗುಲಾಬಿಚಮಕಾ | ಕರಿನೂಲು |
| ೧೯ | ರಿಕ್ಕ | ೧೦ ಎಳೆ ಹಸಿರು/ ಫಿರೋಜಿ/ಕರಿಚಮಕಾ<br>೨ ಎಳೆ ಬಿಳಿಚಮಕಾ<br>೨ ಎಳೆ ಗುಲಾಬಿಚಮಕಾ<br>೨ ಎಳೆ ಬಿಳಿಚಮಕಾ | ೧೪ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ<br>೨ ಎಳೆ ಕರಿನೂಲು<br>೨ ಎಳೆ ಬಿಳಿಚಮಕಾ |
| ೨೦ | ಚದುರಂಗ ಚಿಕ್ಕಿ | ೧೮ ಎಳೆ ಹಸಿರು/ ಜಾಂಬಾಳಚಮಕಾ<br>೪ ಎಳೆ ಗುಲಾಬಿಜಾಂಬಾಳಾ<br>೪ ಎಳೆ ಕೇಸರಿ/ ಬಿಳಿಚಮಕಾ/ ರೇಷ್ಮೇ | ೧೮ ಎಳೆ ಕರಿನೂಲು<br>೪ ಎಳೆ ಕೇಸರಿ/<br>ಬಿಳಿಚಮಕಾ ರೇಷ್ಮೆ |

ಮೇಲ್ಕಾಣಿಸಿದ ಮಾದರಿಯ ಗರ್ಭ ವಿನ್ಯಾಸಗಳ ರಚನೆಯಲ್ಲಿ ಹಾಸು ತಯಾರಿಸುವಾಗ ಬೇಕಾದ ಬಣ್ಣದ ಚಮಕಾ ಬಳಸಬಹುದು. ಹಾಸು ಸಂಪೂರ್ಣವಾಗಿ ಚಮಕಾದಿಂದ ಕಟ್ಟಿದರೆ ಅದಕ್ಕೆ 'ಗರ್ಭಸೀರೆ'ಎಂದು ಕರೆಯುವರು. ಉದಾ: ಗರ್ಭಕೊಂಡಿ ಚಿಕ್ಕಿಯಲ್ಲಿ ಹಾಸು ಮಾತ್ರ ಸಂಪೂರ್ಣವಾಗಿ ಚಮಕಾ ಇರುವುದು.

## ೪.೨.೨. ಸೀರೆಯ ದಡಿ ವಿನ್ಯಾಸ

ಇಳಕಲ್ಲ ಸೀರೆಯ ವಿನ್ಯಾಸದಲ್ಲಿ ವಿಶೇಷತೆಯನ್ನು ತೋರುವ ಮತ್ತೊಂದು ಭಾಗವೆಂದರೆ ದಡಿ. ತುಂಬಾ ಚಿಕ್ಕ ಭಾಗವಾದ ದಡಿ ಸೌಂದರ್ಯ ದೃಷ್ಟಿಯಿಂದ ಎಲ್ಲರ ಗಮನವನ್ನು ಸೆಳೆದಿರುತ್ತದೆ. ೯ ಸೆ.ಮೀ. ಅಗಲವಾದ ದಡಿ ಸೀರೆಗೆ ಮೆರಗನ್ನು ತಂದುಕೊಡುತ್ತದೆ. ಇಳಕಲ್ಲ ಸೀರೆಯ ದಡಿಯಲ್ಲಿ ಐದು ಪ್ರಕಾರಗಳಿವೆ.

೧. ಚಿಕ್ಕ ಪರಾಸ ದಡಿ

೨. ಗಾಯತ್ರಿ ದಡಿ

೩. ಗೋಮಿ ದಡಿ

೪. ಗೊಡ್ಡ ಪರಾಸ್ ದಡಿ

೫. ರೂಫಿ ದಡಿ

**೧. ಚಿಕ್ಕ ಪರಾಸ ದಡಿ**

"ಚಿಕ್ಕಪರಾಸ ದಡಿ ಇಳಕಲ್ಲ ಸೀರೆಗಳಲ್ಲಿ ಅತೀ ಹೆಚ್ಚು ಬಳಸಲ್ಪಡುವ ದಡಿ. ವಿನ್ಯಾಸಗಳಲ್ಲಿ ಒಂದು ಎಂದು ಹೇಳಬಹುದು. ಕೇಸರಿಚಮಕಾ ರೇಷ್ಮೇ ಎಳೆಗಳಿಂದ ಹಸಿರು ಹಾಸಿನ ಮೇಲೆ ತ್ರಿಕೋನ ಆಕೃತಿಯ ಚಿಕ್ಕ ವಿನ್ಯಾಸವನ್ನು ರಚಿಸುವುದರಿಂದ ಈ ದಡಿಗೆ "ಚಿಕ್ಕ ಪರಾಸ ದಡಿ" ಎಂದು ಕರೆಯುತ್ತಾರೆ. ಈ ದಡಿ ರಚನೆಗಾಗಿ ೮ ಕೋಲು ಹಾಗೂ ೮ ಮಳಿಯ ಪಿಂಜರವನ್ನು ಉಪಯೋಗಿಸಲಾಗುತ್ತದೆ. ಚಿಕ್ಕ ವಿನ್ಯಾಸಕ್ಕಾಗಿ ಜರಿ ಬಳಸಿದರೆ ಆ ದಡಿಗೆ ಜರಿ ಚಿಕ್ಕಪರಾಸ ದಡಿ ಎಂದು ಕರೆಯುವರು. ಚಿಕ್ಕ ಪರಾಸ ದಡಿ ರಚನೆಗಾಗಿ ಬಳಸುವ ನೂಲಿನ ವಿವರವನ್ನು ಇಲ್ಲಿ ನೋಡಬಹುದು [೫] ಈ ದಡಿ ವಿನ್ಯಾಸಕ್ಕೆ ಬಳಸುವ ನೂಲಿನ ವಿವರಗಳು ಈ ರೀತಿ ಇವೆ.

| | |
|---|---|
| ಚಿಕ್ಕಪರಾಸ | :: ಕೆಂಪುಚಮಕಾ |
| ಬುಗುಡಿ | : ಆರೆಳೆ ಬಿಳಿಚಮಕಾ |
| ಹಳದಿಗೀರು | : ೨ ಎಳೆ ಹಳದಿಚಮಕಾ |
| | : ೧ ಎಳೆ ಕೆಂಪುಚಮಕಾ |
| | : ೪ ಎಳೆ ಹಳದಿಚಮಕಾ |
| ಜೋಮಾಲಿ | : ೧–೨ ಎಳೆ ಪರಾಸ (ಕೇಸರಿ ಚಮಕಾ) |
| | : ೧ – ಎಳೆ ಕೆಂಪುಚಮಕಾ |
| | : ೧–೨ ಪರಾಸಚಮಕಾ |
| ಚಿಕ್ಕಿ | : ಪರಾಸ (ಕೇಸರಿ) ಚಮಕಾ ಮತ್ತು ಹಸಿರು ಭೂಮಾ |
| ಹೊಕ್ಕು | : ೬೦ ಕೌಂಟ್ಸ ಕಪ್ಪು ಬಣ್ಣದ ಹತ್ತಿ ನೂಲು |

**ಜರಿ ಚಿಕ್ಕಿ ಪರಾಸ ದಡಿ**

| | |
|---|---|
| ಕಡಿಜಾಲ ಮತ್ತು ದುಂಡು | : ಕೆಂಪು ಅಥವಾ ಕೇಸರಿ ಚಮಕಾ |
| ಬುಗುಡಿ | : ೯ ಎಳೆ ಬಂಗಾರ ವರ್ಣದ ಪಾಲಿಸ್ಟರ ಜರಿ |

| | |
|---|---|
| ಹಳದಿ ಗೀರು | : ೪ ಎಳೆ ಹಳದಿಚಮಕಾ / ರೇಷ್ಮೆ |
| | : ೨ ಎಳೆ ಕೆಂಪುಚಮಕಾ/ ರೇಷ್ಮೆ |
| | : ೪ ಎಳೆ ಹಳದಿಚಮಕಾ/ ರೇಷ್ಮೆ |
| ಜೋಮಾಲಿ | : ಬಂಗಾರ ವರ್ಣದ ಪಾಲಿಸ್ಟಾರ್ ಜರಿ |
| ಚಿಕ್ಕಿ | : ಕೆಂಪು ಭೂಮಾ (ಚಮಕಾ) ಮತ್ತು ಬಂಗಾರ ವರ್ಣದ ಪಾಲಿಸ್ಟಾರ್ ಜರಿ |

ಚಿಕ್ಕಿ ಪರಾಸ ದಡಿಯಲ್ಲಿ ಈ ಕೆಳಗಿನಂತೆ ಎಳೆಗಳನ್ನು ಕಟ್ಟಲಾಗುತ್ತದೆ.

| | |
|---|---|
| ೧೦೦ ಕೆಂಪು (ಕಡಿಜಾಲ) | ೨ ಎಳೆ ಹಳದಿ |
| ೨ ಎಳೆ ಕೆಂಪು | ೨ ಎಳೆ ಹಳದಿ |
| ೪ ಎಳೆ ಹಳದಿ | ೩೨ ಎಳೆ ಕೆಂಪು |
| ೪ ಎಳೆ ಕೆಂಪು | ೪ ಎಳೆ ಹಳದಿ |
| ೪ ಎಳೆ ಹಳದಿ | ೨ ಎಳೆ ಕೆಂಪು |
| ೨ ಎಳೆ ಕೆಂಪು | ೨ ಎಳೆ ಹಳದಿ |
| ೨ ಎಳೆ ಹಳದಿ | ೧೨ ಎಳೆ ಹಸಿರು |
| ೮೦ಎಳೆ ಹಸಿರು (ಭೂಮಾ) | ೨ ಎಳೆ ಹಳದಿ |
| ೨ ಎಳೆ ಹಳದಿ | ೨ ಎಳೆ ಹಳದಿ |
| ೨ ಎಳೆ ಕೆಂಪು | ೪ ಎಳೆ ಹಳದಿ |
| ೪ ಎಳೆ ಹಳದಿ | ೩೬ ಎಳೆ ಕೆಂಪು ( ದುಂಡು) |
| ೪ ಎಳೆ ಕೆಂಪು | ೯೦ಎಳೆ ಕೇಸರಿ (ಪರಾಸ)ಹೆಚ್ಚಿನಹಾಸು |
| ೪ ಎಳೆ ಹಳದಿ | ೧೮ಎಳೆಬಿಳಿಪೇಟ |

"ಜರಿ ಚಿಕ್ಕಪರಾಸ ದಡಿ" ರಚಿಸಲು ಕೇಸರಿ ಬಿಳಿ ಪೇಟ ಬರಲು ಗೋಲ್ಡನ್‌ಜರಿಯನ್ನು ಹಾಗೂ ಭೂಮಾದ ಬದಲಾಗಿ ಕೆಂಪು ಭೂಮವನ್ನು ಉಪಯೋಗಿಸುತ್ತಾರೆ. ಚಿಕ್ಕಿ ಪರಾಸ ದಡಿಯ ಅಗಲ ೯ ಸೆ.ಮೀ.ಇದ್ದರೆ ಜರಿ ಚಿಕ್ಕ ಪರಾಸ ದಡಿಯ ಅಗಲ ೧೨ ಸೆ.ಮೀ. ಇರುವುದು. ರೇಷ್ಮೇ ಸೀರೆಗಳು ಸಾಮಾನ್ಯವಾಗಿ ಜರಿ ಚಿಕ್ಕ ಪರಾಸನ್ನು ಹೊಂದಿರುತ್ತವೆ. ಶುದ್ಧ ರೇಷ್ಮೇ ಸೀರೆಗಳಲ್ಲಿ ದಡಿಯ ಹಾಸು ಮತ್ತು ಹೊಕ್ಕು ಒಂದೇ ಬಣ್ಣದ ನೂಲಿನಿಂದ ತಯಾರಿಸಲ್ಪಟ್ಟಿದ್ದರೆ ಉಳಿದ ಸೀರೆಗಳಲ್ಲಿ ಹೊಕ್ಕಾಗಿ ಸಾಮಾನ್ಯವಾಗಿ ಕರಿನೂಲನ್ನು ಬಳಸುತ್ತಾರೆ"

## ೨. ಗಾಯತ್ರಿ ದಡಿ (ಗಾಡಿದಡಿ)

ಇಳಕಲ್ಲ ಸೀರೆಯ ದಡಿಗಳಲ್ಲಿ ಅತಿ ಹೆಚ್ಚು ಅಗಲ ಹೊಂದಿದ ದಡಿ ಇದು. ಇದನ್ನು ಎರಡು ಬಣ್ಣಗಳಿಂದ ನೇಯ್ಯಲಾಗಿದೆ. ಕೆಂಪುಹಾಸಿನ ಮೇಲೆ ಗಾಡಿ ಹೂವು ವಿನ್ಯಾಸ ರಚಿಸಿ ಅದಕ್ಕೆ "ಕೆಂಪು ಗಾಯತ್ರಿ"ಯೆಂದು, ಉಳಿದ ದಡಿಗಳಂತೆ ಹಳದಿ ಗೀರು, ಜೋಮಾಲೆ ಮತ್ತು ಬುಗುಡಿಯನ್ನು ಹೊಂದಿವೆ. ಜೊತೆಗೆ ನಾಲ್ಕು ಪಟ್ಟಿಯ ಹೂವಿನ ವಿನ್ಯಾಸವನ್ನು ಪಡೆದುಕೊಂಡಿದೆ. ಜರಿ ಚಿಕ್ಕಿ ಪರಾಸ ದಡಿಯಲ್ಲಿರುವಂತೆ ಬಂಗಾರ ವರ್ಣದ ಪಾಲಿಸ್ಟಾರ ಜರಿಯಿಂದ ವಿನ್ಯಾಸವನ್ನು ಒಪ್ಪುಗೊಳಿಸಲಾಗಿದೆ.

ಗಾಯತ್ರಿದಡಿ ರಚನೆಯಲ್ಲಿ ಬಳಸುವ ನೂಲಿನ ವಿವರ:

| | |
|---|---|
| ಕಡಿಜಾಲ ಹಾಗೂ ದುಂಡು | : ಕರಿ ಅಥವಾ ಕೆಂಪು ರೇಷ್ಮೇ/ಚಮಕಾ |
| ಬುಗುಡಿ | : ಪಾಲಿಸ್ಟಾರ್ ಜರಿ (ಬಂಗಾರವರ್ಣ) |
| ಭೂಮಾ | : ಕೆಂಪು ಪಲಿಸ್ಟಾರ್ |
| ಹಳದಿಗೀರು | : ಹಳದಿ ಚಮಕಾ/ ರೇಷ್ಮೇ |
| ಜೋಮಾಲಿ | : ಜರಿ |
| ವಿನ್ಯಾಸ | : ಪಾಲಿಸ್ಟಾರ್ ಜರಿ |
| ಹೊಕ್ಕು | : ಕರಿನೂಲು |

ಹಾಗೆಯೆ ವಿವಿಧ ನೂಲಿನ ಎಳೆಗಳನ್ನು ಆಯಾ ದಡಿಯ ಅಳತೆಯ ವಿನ್ಯಾಸಕ್ಕೆ ಅಳವಡಿಸುತ್ತಾರೆ.

## ೩. ಗೋಮಿದಡಿ

ಸರಳ ವಿನ್ಯಾಸವನ್ನು ಹೊಂದಿದ ಗೋಮಿದಡಿ ಗೋಧಿಕಾಳುಗಳನ್ನು ಸಾಲಿನಲ್ಲಿ ಇಟ್ಟ ವಿನ್ಯಾಸದಲ್ಲಿ ಕಾಣಿಸುತ್ತದೆ. ಮುತ್ತು ಪೋಣಿಸಿದ ಹಾಗೆ ಕಾಣುವ ಈ ವಿನ್ಯಾಸಕ್ಕೆ "ಇಳಕಲ್ಲ ದಡಿ" ಎಂಬ ಪರ್ಯಾಯ ನಾಮದಿಂದ ಕರೆಯುತ್ತಾರೆ. ಗೋಮಿ ದಡಿಯಲ್ಲಿ ಜೋಮಾಲೆ ಇರುವುದಿಲ್ಲ. ಗಾಯತ್ರಿ ದಡಿಯಲ್ಲಿರುವಂತೆ ಇದು ಕೂಡ ಎರಡು ಪಟ್ಟಿಯ ಗೋಮು ವಿನ್ಯಾಸವನ್ನು ಹೊಂದಿದೆ. ಈ ದಡಿಯನ್ನು ಇಳಕಲ್ಲಿನ ನೇಕಾರರು ಪ್ರಪ್ರಥಮವಾಗಿ ರೂಪಿಸಿದರೆಂಬ ಪ್ರತೀತಿಯಿದೆ.

## ೪. ಗೊಡ್ಡ ಪರಾಸ್ ದಡಿ

ಇದು ವಿನ್ಯಾಸದ ದೃಷ್ಟಿಯಿಂದ ಚಿಕ್ಕ ಪರಾಸ್ ದಡಿಯನ್ನು ಹೋಲುತ್ತದೆ. ದೇವಾಲಯ ಗೋಪುರದ ಆಕಾರದಂತಹ ಚಿಕ್ಕ ಚುಕ್ಕೆಗಳನ್ನು ಇದು ಹೊಂದಿದೆ. ಇದರಲ್ಲಿ ಬುಗುಡೆ,

ಜೋಮಾಲ ಹಾಗೂ ಗೊಡ್ಡ ಚುಕ್ಕಿಗಳನ್ನು ಪಾಲಿಸ್ಟಾರ್ ಜರಿಯಲ್ಲಿಯೇ ನೇಯ್ದಿರುತ್ತಾರೆ. ಕೆಂಪು ಚಮಕಾ ಅಥವಾ ರೇಷ್ಮೇ, ಹಳದಿಬೀರು, ಗೋಲ್ಡನ್ ಜರಿ ಮುಂತಾದ ನೂಲನ್ನು ಬಳಸಲಾಗುತ್ತದೆ.

೫. ರೂಫಿಲ್ ದಡಿ

ಇದು ಗಾಯತ್ರಿ ದಡಿಯನ್ನು ವಿನ್ಯಾಸದಲ್ಲಿ ಸಂಪೂರ್ಣವಾಗಿ ಹೋಲುತ್ತದೆ. ಗಾಯತ್ರಿ ದಡಿಗಿಂತ ಅಗಲ ಪ್ರಮಾಣದಲ್ಲಿ ಕಡಿಮೆ ಇರುತ್ತದೆ. ಅಲ್ಲಿ ಬಳಕೆಯಾಗುವ ಎಲ್ಲಾ ನೂಲುಗಳು ರೂಫಿಲ್‌ನಲ್ಲಿ ಬಳಕೆಯಾಗಿವೆ. ಅಲ್ಲಿ ನಾಲ್ಕು ಪಟ್ಟಿ ವಿನ್ಯಾಸ ಇದ್ದರೆ ಇದು ಮೂರು ಪಟ್ಟಿಗೆ ಸೀಮಿತವಾಗಿದೆ. ಎಳೆ ಕೆಂಪು ಚಮಕಾ ಎಳೆಹಳದಿ ಬೀರು, ಪಾಲಿಸ್ಟಾರ್ ಜರಿ ನೂಲುಗಳನ್ನು ಪ್ರಮಾಣಕ್ಕೆ ಸರಿಯಾಗಿ ಬಳಸಲಾಗುತ್ತದೆ.

ಹೀಗೆ ಇಳಕಲ್ಲ ಸೀರೆಗಳ ದಡಿಯ ವಿನ್ಯಾಸದಲ್ಲಿ ನೇಕಾರರು ತುಂಬಾ ಕುಶಲತೆಯಿಂದ ನೂಲನ್ನು ಸಂಯೋಜನೆ ಗೊಳಿಸಿರುವುದು ತಿಳಿದುಬರುತ್ತದೆ. ವಿಸ್ತಾರವಾದ ವಡ್ಲಿಗೆ ಔಚಿತ್ಯಪೂರ್ಣವಾದ ದಡಿಯನ್ನು ವಿನ್ಯಾಸಗೊಳಿಸುವುದೆಂದರೆ ಅಲ್ಲಿ ಬಳಸುವ ನೂಲು ಅದರ ಪ್ರಮಾಣ, ವಿಸ್ತಾರ, ಮುಂತಾದವುಗಳ ವಿಷಯದಲ್ಲಿ ಒಂದು ಸೌಂದರ್ಯ ಪ್ರಜ್ಞೆ ನೇಕಾರರಿಗೆ ಇರಬೇಕಾಗುತ್ತದೆ. ಆ ಎಲ್ಲಾ ಅರ್ಹತೆಗಳನ್ನು ಹೊಂದಿರುವ ಇವರ ಕರಕುಶಲಕಲೆಯನ್ನು ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಗೆ ಕೊಂಡೊಯ್ಯಬಹುದು. ದಡಿ ತಿರಕಿ ವಿನ್ಯಾಸದಲ್ಲಿ ಇಳಕಲ್ಲಿನ ನೇಕಾರರು ದುಂಡುತಿರುಕಿ, ಕ್ಯಾದಗಿ ತೆನಿತಿರುಕಿ, ಎಂದು ಎರಡು ವಿನ್ಯಾಸಗಳನ್ನು ಕಂಡುಕೊಂಡಿದ್ದಾರೆ.

## ೪.೨.೩ ಸೀರೆಯ ಸೆರಗು ವಿನ್ಯಾಸ

ಸೆರಗು ಸೀರೆಯಲ್ಲಿ ಹೊದೆಯುವ ಭಾಗ, ಸೀರೆಯ ಮೇಲೂ ಹೊದಿಕೆಯ ಅಂಚು ಎನ್ನುವ ಅರ್ಥ ಪ್ರಾಚೀನ ಸಾಹಿತ್ಯದಿಂದ ತಿಳಿದು ಬರುತ್ತದೆ.

ಆ ಗ್ರಹಸ್ಥನ ಪಂಡತಿ ಮುಖದೋಳ್ ಸೆರಂಗನಿಕ್ಕಿಕೊಂಡು
ಮಗಂಗೆ ಮೊಲೆಯುಡುವುದು ಕಂಡು

(ಪಂಚತಂತ್ರ ೨೨೯-೨)

ಎಂಬ ಪಂಚತಂತ್ರದ ಮಾತು ಮೇಲಿನ ಅರ್ಥವನ್ನೇ ಹೋಲುತ್ತದೆ. ಹೀಗೆ ಮೈ ಹೊದಿಕೆಯಾಗಿರುವ ಸೆರಗು ವಿನ್ಯಾಸಗಳಿಂದ ಕೂಡಿರುತ್ತದೆ. ಇವುಗಳಲ್ಲಿ ಇಳಕಲ್ಲ ಸೀರೆಗೆ

ಸಂಬಂಧಿಸಿದಂತೆ ಬೇರೆ ಬೇರೆ ಬಣ್ಣಗಳ ಹಾಗೂ ವಿನ್ಯಾಸಗಳಲ್ಲಿ ಸೆರಗಿನ ವೈವಿಧ್ಯತೆಯನ್ನು ಕಾಣಬಹುದು. ಎಲೆ, ಹೂವು, ಬಳ್ಳಿ, ಹಣ್ಣುಗಳ ವಿನ್ಯಾಸದಿಂದ ತೋಪತೆನಿ ಸೆರಗು ಕೆಂಪು ವರ್ಣದ ಸೆರಗಿನಲ್ಲಿ ಬಿಳಿ ತೋಪತೆನಿಗಳು ಸಾವಾರಿಯಲ್ಲಿ ನಾಲ್ಕು ಆಟವಾರಿ, ಸಾವಾರಿಸೀರೆಗಳಲ್ಲಿ ಐದು ತೆನಿಗಳನ್ನು ಚಿತ್ರಿಸಿರುತ್ತಾರೆ. ವಿಶೇಷವಾಗಿ ತೋಪ ತೆನಿ ಸೀರೆಗೆ ಇಳಕಲ್ಲ ಸೀರೆಯ ಪ್ರಥಮ ಸ್ಥಾನವನ್ನು ಆವರಿಸಿದೆ.

ಈ ಸೆರಗಿನ ರಚನೆಯು ಒಂದು ರೀತಿಯಲ್ಲಿ ಕಸೂತಿ ಕಲೆ ಇದ್ದಹಾಗೆ, ಇಲ್ಲಿ ಮೂರು ಲಾಳಿಗಳನ್ನು ಬಳಸಿಕೊಂಡು ಇಬ್ಬರು ನೇಕಾರರು ಕೈಯಿಂದ ನೇಯುವರು ಈ ಸೆರಗಿನ ವಿನ್ಯಾಸ ಬೇರೆ ಸೀರೆಗಳಲ್ಲಿ ಕಂಡು ಬರುವುದಿಲ್ಲ. ಆದ್ದರಿಂದ ಟೋಪತೆನಿ ಸೀರೆಗಳನ್ನು "ಇಳಕಲ್ಲ ಸೆರಗು" ಎಂದು ಕರೆಯುತ್ತಾರೆ. ಇಳಕಲ್ಲ ಸೀರೆ ಪಾರಂಪರಿಕವಾಗಿ ಯಾವುದೇ ಬಣ್ಣ ಹೊಂದಿದ್ದರೂ ಅದರ ಹಾಸು ಮಾತ್ರ ಕೆಂಪು ರೇಷ್ಮೆಯನ್ನು ಹೊಂದಿದ್ದು, ಅದರ ಮೇಲೆ ಬಿಳಿರೇಷ್ಮೆ ನೂಲಿನಿಂದ ಜೋಳದ ತೆನೆಯ ವಿನ್ಯಾಸವನ್ನು ಅಥವಾ ಕಳಸದ ಮೇಲಿಡುವ ಮುತ್ತಿನ ತೆನೆಯ ವಿನ್ಯಾಸವನ್ನು ರಚಿಸಲಾಗಿರುತ್ತದೆ. ಕಾಲಕ್ಕೆ ತಕ್ಕ ಹಾಗೆ ಜನರ ಅಭಿರುಚಿಗೆ ಅನುಗುಣವಾಗಿ ಸದ್ಯ ಇಳಕಲ್ಲ ಸೀರೆಯು ಟೋಪತೆನಿ ರಚನೆಯಲ್ಲಿ ಬೇರೆ ಬೇರೆ ಬಣ್ಣಗಳ ಬಳಕೆಯಾಗುತ್ತಿದೆ. ಆದರೆ ಸೆರಗಿನ ವಿನ್ಯಾಸದಲ್ಲಿ ಮಾತ್ರ ಯಾವುದೇ ಬದಲಾವಣೆಯಾಗಿಲ್ಲ. ಸೀರೆಯ ವಡ್ಲವನ್ನು ಚಮಕಾ ಹಾಗೂ ಹತ್ತಿ ನೂಲಿನಿಂದ ತಯಾರಿಸಿದರೂ ಕೂಡ ಸೀರೆಯ ಸೆರಗನ್ನು ಮಾತ್ರ ಸಂಪೂರ್ಣವಾಗಿ ರೇಷ್ಮೆಯಿಂದಲೇ ನೇಯುವುದು ಇಲ್ಲಿಯ ನೇಕಾರರ ವೈಶಿಷ್ಟ್ಯವಾಗಿದೆ.[2]



ಇಳಕಲ್ಲ ಸೀರೆಯ ಮತ್ತೊಂದು ವಿಶೇಷವೆಂದರೆ ಸೀರೆಗಳ ತಯಾರಿಕೆಯಲ್ಲಿ ಸೆರಗಿಗೆ ಹಾಗೂ ವಡ್ಲಿಗೆ ಬೇರೆ ಬೇರೆ ಹಾಸುಗಳನ್ನು ಸಿದ್ದಪಡಿಸಿ "ಕೊಂಡಿ" ರೂಪದಲ್ಲಿ ಬೆಸೆಯುತ್ತಾರೆ. ಇದನ್ನು ಸೆರಗು ಕೊಂಡಿ ಕೆಚ್ಚುವುದೆಂದು ಕರೆಯುತ್ತಾರೆ. ಈ ವಿಧಾನ ಸೀರೆಯ ಸೆರಗು ಮತ್ತು ವಡ್ಲುಗಳ ವೈಶಿಷ್ಟ್ಯವನ್ನು ಹೆಚ್ಚಿಸುತ್ತದೆ. ಬೇರೆ ಬೇರೆ ಪ್ರಮಾಣದಲ್ಲಿ ನೂಲನ್ನು ಬಳಸುವುದರ ಮೂಲಕ ಸೆರಗಿನ ವಿನ್ಯಾಸದ ಗುಣಮಟ್ಟದಲ್ಲಿಯೂ ವ್ಯತ್ಯಾಸವನ್ನು ಕಾಣಬಹುದು.

ಇಳಕಲ್ಲ ಸೀರೆಯ ಸೆರಗು ವಿನ್ಯಾಸಕ್ಕನುಗುಣವಾಗಿ ತೋಪತೆನಿಸೆರಗು ಮತ್ತು ಪತ್ತಲ ಸೆರಗು ಎಂಬ ಎರಡು ವಿಧದ ವಿನ್ಯಾಸಗಳನ್ನು ಗಮನಿಸಬಹುದು. ತೋಪತೆನಿ ಹೆಸರೇ ಸೂಚಿಸುವಂತೆ ತೆನಿಯ ವಿನ್ಯಾಸವನ್ನು ಹೊಂದಿರುತ್ತದೆ.ಮತ್ತು ಇದು ಪತ್ತಲ ಸೆರಗಿನ ವಿನ್ಯಾಸಕ್ಕಿಂತ ಹೆಚ್ಚು ಆಕರ್ಷಣೀಯವಾಗಿರುತ್ತದೆ.ಕೆಂಪು ಬಿಳಿ ಬಣ್ಣಗಳ ಸಂಯೋಜನೆಯಿಂದ ನೋಡುಗರ ಮನ

ಸೆಳೆಯುವ ಕುಶಲತೆ ಇರುತ್ತದೆ. ಎರಡು ತೆನೆಯ ಪಟ್ಟಗಳಿದ್ದು ಒಂದೊಂದು ಪಟ್ಟಿಯಲ್ಲಿ ನಾಲ್ಕು ತೆನಿಗಳನ್ನು ಸಂಯೋಜಿಸಲಾಗಿದೆ. ಇದು ತೋಪತೆನಿ ಸೆರಗಿನ ವಿಶೇಷ ಕೆಂಪುರೇಷ್ಮೇ, ಬಿಳಿರೇಷ್ಮೇಗಳಿಂದ ಹಾಸುಹೊಕ್ಕು ವಿನ್ಯಾಸವನ್ನು ಹೊಂದಿರುವ ತೋಪತೆನಿ ಸೆರಗಿನ ಅಗಲ ೧೨೦ ಸೆ.ಮೀ. ಉದ್ದ ೩೬ ಸೆ.ಮೀ. ಪತ್ತಲ ಸೆರಗಿನಲ್ಲಿ ತೆನೆಯ ವಿನ್ಯಾಸ ಇರುವುದಿಲ್ಲ. ಇದು ಕೆಂಪು ಹಾಸಿನ ಮೇಲೆ ಎರಡು ಬಿಳಿಪಟ್ಟಿಗಳನ್ನು ಮಾತ್ರ ಹೊಂದಿರುತ್ತದೆ. ಅಷ್ಟಾಗಿ ಆಕರ್ಷಣ ಇಲ್ಲದೇ ಇದರ ವಿನ್ಯಾಸ ಸರಳ ಮತ್ತು ಸಹಜತೆಯಿಂದ ಕೂಡಿರುತ್ತದೆ.

ಸಾಂಸ್ಕೃತಿಕವಾಗಿ ಸೀರೆಯ ಮೇಲುಹೊದಿಕೆಯ ಅಂಚಿನ ಭಾಗವಾದ ಸೆರಗಿಗೆ ಮಹತ್ವದ ಸ್ಥಾನವಿದೆ. ಮದುವೆಯ ಸಂದರ್ಭದಲ್ಲಿ ಸ್ತ್ರೀಯರ ಸೀರೆ ಸೆರಗು ಮತ್ತು ಪುರುಷರ ಉತ್ತೇರಿಯದ ತುದಿಗಳನ್ನು ಗಂಟುಹಾಕುತ್ತಾರೆ. ಇದು "ಬ್ರಹ್ಮಗಂಟು" ಎಂದು ಕರೆಯುವ ವಾಡಿಕೆ ಇದೆ. ಇದನ್ನು ಸೆರಗಿಗೆ ಗಂಟು ಹಾಕುವುದು ಎಂದು ಹೇಳುತ್ತಾರೆ. ಈ ಗಂಟು ಹಾಕುವ ಉಪಕ್ರಮದಿಂದಲೆ ನಮ್ಮ ಆಚಾರ ವಿಚಾರಗಳನ್ನು ಅನೇಕ ರೀತಿಯಲ್ಲಿ ವಿಶ್ಲೇಷಿಸಬಹುದಾಗಿದೆ. ಸೆರಗಿನಲ್ಲಿ ಗಂಟು ಹಾಕಿಕೊಳ್ಳು ಇದರರ್ಥ ದಾಂಪತ್ಯ ಜೀವನದಲ್ಲಿ ಯಾವುದೇ ಸಂದರ್ಭದಲ್ಲಿ ಬಿಡಲಾರದ ಒಂದು ಸಂಬಂಧ. ಇನ್ನೊಂದು ಅರ್ಥದಲ್ಲಿ ನೆನಪಿನಲ್ಲಿಟ್ಟುಕೊಳ್ಳು ಎಂದು ಹೇಳುತ್ತಾರೆ. ಅದೇ ರೀತಿ "ಸೆರಗೊಡ್ಡು" ಇದು ದೀನರೂಪದ ಯೋಚನೆಯನ್ನು ಸೂಚಿಸುವ ಪದ. ಸೆರಗನ್ನು ಮುಂದೆ ಹಿಡಿಯುವುದರಿಂದ ಇಂಥ ಉಪಕ್ರಮಗಳು ಉತ್ಕಟ ಯೋಚನೆಯ ಪ್ರಸಂಗದಲ್ಲಿ ಬಳಕೆಗೆ ಬಂದಿತೆಂದು ತೋರುತ್ತದೆ.

ಮಡದಿಯ ಬಡಿದಾನ
ಮನದಾಗ ಮರುಗ್ಯಾನ
ಒಳಗೋಗಿ ಸೆರಗ ಹಿಡಿದು ಕೇಳ್ಯಾನ
ನಾನೆಚ್ಚೂ ನಿನ್ನ ತವರೆಚ್ಚೂ

ಇಲ್ಲೆಲ್ಲಾ ಯೋಚಿಸುವ, ಬೇಡಿಕೊಳ್ಳುವ, ಮನ್ನಿಸುವ ಮುಂತಾದ ಅರ್ಥಗಳು ಹೊರಡುತ್ತವೆ. ಹಾಗೆಯೆ "ಸೆರಗು ಸೊಂಕು" ಎಂಬ ಮಾತು ಬಳಕೆಯಲ್ಲಿದೆ. ಪ್ರಭಾವಕ್ಕೊಳಗಾಗು ಎಂಬ ಅರ್ಥ ಹೊರಡುತ್ತದೆ. ಬಹುಶಃ ಇದರ ಹತ್ತಿರದ ಪದವಾಗಿ "ಸೆರಗು ಬೀಸು" ಎಂಬ ಮಾತು ಕೇಳಿ ಬರುತ್ತದೆ. ಧರ್ಮಬಾಹಿರ ಸಂಬಂಧಕ್ಕಾಗಿ ಪುರುಷನನ್ನು ಮರಳು ಮಾಡಿ ಸಂದರ್ಭ ಸೂಚನೆಯ ಹಿನ್ನೆಲೆಯಲ್ಲಿ ಇದು ಬಳಕೆಯಾಗಿರಬೇಕು. ಹಾಗೆಯೆ "ಸೆರಗುಬಿಡು" ದಂಪತಿಗಳ ಜಗಳದಿಂದ ಇಬ್ಬರು ಕೂಡಿ ಬದುಕಲು ಶಕ್ಯವಿಲ್ಲ ಎಂದಾಗ ಸೆರಗು ಬಿಡು ಎಂಬ ಮಾತು "ವಿವಾಹ ವಿಚ್ಛೇದನ" ಪಡೆಯುವ

ಕ್ರಿಯೆಯನ್ನು ಸೂಚಿಸುತ್ತದೆ. 'ಸೆರಗುಹರಿ' ಎಂಬ ನುಡಿಗಳ ಹಿಂದೆ ಗಂಡ ಹೆಂಡತಿಯನ್ನು ಬಿಡುವಾಗಿನ ಆಚರಣೆಯನ್ನು ಸೂಚಿಸುತ್ತದೆ. ಹಾಗೆಯೇ "ಸೆರಗು ಹಾಸು" ಅಂದರೆ ಹಾದರ ಮಾಡು, ವ್ಯಭಿಚಾರಕ್ಕೆ ಇಳಿ ಎಂಬ ಅರ್ಥದಲ್ಲಿಯೂ ಬಳಕೆಯಾಗಿದೆ.

ಹೀಗೆ ಮೇಲ್ನೋಟಕ್ಕೆ ಹೊದೆಯುವ ಭಾಗವಾದ ಸೆರಗು ಜಾನಪದರ ದೃಷ್ಟಿಯಲ್ಲಿ ಸಾಂಸ್ಕೃತಿಕ ಸಂಬಂಧವನ್ನು ಹೆಣೆದುಕೊಂಡಿದೆ. ಪ್ರಾಯಶಃ ಈ ಕಾರಣಕ್ಕಾಗಿ "ಇಳಕಲ್ಲಸೀರೆ"ಯ ಸೆರಗು ತಯಾರಿಕೆಯ ಸಂದರ್ಭವನ್ನು ತುಂಬಾ ಪಾವಿತ್ರ್ಯತೆಯಿಂದ, ಪೂಜ್ಯಭಾವನೆಯಿಂದ ನೇಯ್ಯುವ ಪರಂಪರೆಯು ಬೆಳೆದು ಬಂದಿದೆ.

ಇಳಕಲ್ಲ ಸೀರೆಯ ಬಣ್ಣಗಾರಿಕೆಯ ವಿನ್ಯಾಸದೊಂದಿಗೆ ಸಹೋದರಭಾವದಿಂದ ಬೆಳೆದು ಬಂದ ಮತ್ತೊಂದು ಕಲೆ ಕಸೂತಿ. ಸಾಮಾನ್ಯವಾಗಿ ಇದನ್ನು ಕೌದಿಯ ಸಹೋದರ ಕಲೆಯೆಂದು ಕರೆಯುವುದುಂಟು. ಅಂದರೆ ಕೌದಿಯ ಮುಂದುವರಿದ ರೂಪವೇ ಕಸೂತಿ. ಕಸೂತಿ ಎಂದರೆ ಬಣ್ಣಗಳ ದಾರದಿಂದ ಬಟ್ಟೆಗಳಿಗೆ ಮಾಡುವ ಹೆಣಿಗೆಯ ಅಲಂಕಾರ, ಹೀಗಾಗಿ ಕಸೂತಿಕಲೆಯು ಬಹುಪಯೋಗಿ ಸಾಧನವಾಗಿ ಬೆಳೆದು ಬಂದಿದೆ. ಇಲ್ಲಿ ರಚನಾ ವಿಧಾನ ಕುರಿತಂತೆ ಹೊಲಿಗೆ ಕಸೂತಿ, ಹೆಣಿಗೆ ಕಸೂತಿ ಎಂಬ ಎರಡು ಪ್ರಕಾರಗಳಿವೆ. ಕಸೂತಿಯ ರಚನೆಯಲ್ಲಿ ಕಟ್ಟಿಗೆಯ ರಿಂಗು, ಸೂಜಿ, ಕತ್ತರಿ, ಬೇರೆ ಬೇರೆ ವರ್ಣದ ಸಾದಾ ಹಾಗೂ ರೇಷ್ಮೇ ದಾರಗಳನ್ನು ಬಳಸುತ್ತಾರೆ. ಪ್ರಾದೇಶಿಕವಾಗಿ ವೈಶಿಷ್ಟ್ಯವನ್ನು ಹೊಂದಿರುವ ಕಸೂತಿಕಲೆ, ಧಾರ್ಮಿಕ, ಪೌರಾಣಿಕ, ಐತಿಹಾಸಿಕ, ಚಿತ್ರವಿನ್ಯಾಸಗಳನ್ನು ಒಳಗೊಂಡಿರುತ್ತದೆ. ಕರ್ನಾಟಕದ ಕಸೂತಿ ಕಲೆ ನಾಲ್ಕು ರೀತಿಯಲ್ಲಿ ಬೆಳೆದು ಬಂದಿದೆ ಅವುಗಳಲ್ಲಿ "ಗಾವಂಟಿ ಕಸೂತಿ" ಇದನ್ನು "ಕನ್ನಡ ಕಸೂತಿ" ಎಂತಲೂ ಕರೆಯುತ್ತಾರೆ. ನಯನಾಜೂಕುಗಳಿಗೆ ಹೆಸರಾದ ಇದರಲ್ಲಿ ಆದಿ ಅಂತ್ಯಗಳನ್ನು ಗುರುತಿಸುವುದು ಕಷ್ಟ.. ಬಟ್ಟೆಯ ಎರಡು ಬದಿಗಳಲ್ಲಿ ಕಸೂತಿವಿನ್ಯಾಸ ಒಂದೇ ತೆರನಾಗಿರುತ್ತದೆ. "ಮೆಂತೆಕಸೂತಿ" ಇನ್ನೊಂದು ಪ್ರಕಾರಮೆಂತೆಯ ಕಾಳಿನೋಪಾದಿಯಲ್ಲಿ ಸಾಲುಗಳಿರುವುದರಿಂದ ಈ ಹೆಸರು ಬಂದಿದೆ. ಬಟ್ಟೆಯ ಎಳೆಗಳನ್ನು ಎಣಿಸಿ ಈ ಕಸೂತಿಯನ್ನು ಅಳವಡಿಸಬೇಕಾಗುತ್ತದೆ. ಇದಾದ ನಂತರ "ನೇಯ್ಗೆಕಸೂತಿ" ಎಂಬ ಇನ್ನೊಂದು ಪ್ರಕಾರ ಬಟ್ಟೆಯ ಮೇಲಿರುವ ಅಡ್ಡ ಮತ್ತು ಉದ್ದ ಗೆರೆಗಳಲ್ಲಿ ಎಳೆಗಳೊಡನೆ ನೇಯ್ದಂತೆ ಹಾಕಿರುತ್ತಾರೆ. ಕೊನೆಯ ಪ್ರಕಾರವಾದ "ಮುರುಗಿಕಸೂತಿ" ಇದು ಮುರುಗಿ, ಮುರುಗಿಯಾಗಿರುವುದರಿಂದ ಈ ಹೆಸರು ಬಂದಿದೆ. ಈ ಎಲ್ಲ ಕಸೂತಿ ಪ್ರಕಾರಗಳನ್ನು ಇಳಕಲ್ಲ ಸೀರೆಯ ನೇಕಾರರು ಸಾಮಾನ್ಯವಾಗಿ ಅಳವಡಿಸಿಕೊಂಡಿದ್ದಾರೆ.

### ೪.೩. ಆಚರಣೆ : ಇಲಿ ಪೂಜೆ ಜಾತ್ರೆ

ಇಳಕಲ್ಲ ಸೀರೆಯ ಸುತ್ತ ಅನೇಕ ಆಚರಣೆಗಳು, ನಂಬಿಕೆಗಳು ಬೆಳೆದು ಬಂದಿವೆ. ಈ ಎಲ್ಲಾ ಆಚರಣೆ ಮತ್ತು ನಂಬಿಕೆಗಳ ಅಧ್ಯಯನ ಮಾಡುವುದೆಂದರೆ ಆ ಸಮುದಾಯದ ಮನಃಶಾಸ್ತ್ರೀಯ ಇಲ್ಲವೇ ಸಮಾಜಶಾಸ್ತ್ರೀಯ ಅಧ್ಯಯನವನ್ನು ಮಾಡಲು ಆಚರಣೆಗಳು ಆಕರ ಸಾಮಗ್ರಿಗಳಾಗಿ ಲಭ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿ ಇಳಕಲ್ಲಿನ ಇಲಿಪೂಜೆಯ ಆಚರಣೆ ಅತ್ಯಂತ ಸ್ವಾರಸ್ಯಕರ ಸಂಗತಿಯಾಗಿದೆ. ಹಾಗೇ ನೋಡಿದರೆ ಮೂಷಕನ ವೈರಿಯಾದ ಸರ್ಪವನ್ನು ಆರಾಧಿಸುವ ಪರಂಪರೆ ಬೆಳೆದು ಬರಬೇಕಿತ್ತು. ಆದರೆ, ಅದಕ್ಕೆ ಮುಂದಾಗದ ಇಳಕಲ್ಲ ನೇಕಾರರು ಗಣಪತಿಯ ವಾಹನವಾದ ಇಲಿಯನ್ನು ಆರಾಧಿಸುವ ಸತ್ಪರಂಪರೆಯನ್ನು ರೂಢಿಸಿಕೊಂಡಿದ್ದಾರೆ. ಇಳಕಲ್ಲಿನ ಇಲಿಪೂಜೆ ಆಚರಣೆ ವರ್ಷಕ್ಕೊಮ್ಮೆ ನೆಡೆಯುತ್ತದೆ. ಇದನ್ನು ಇಲಿವಾರ ಅಥವಾ ಇಲಿಯಮ್ಮನ ಹಬ್ಬ ಎಂದು ಕರೆಯುತ್ತಾರೆ. ಭಾದ್ರಪದ ಶುಕ್ಲಚೌತಿಯ ಮರುದಿನ ಇಳಕಲ್ಲಿನಲ್ಲಿ ಇಲಿಪೂಜೆ ಆಚರಣೆ ನೆಡೆಯುತ್ತದೆ. ಈ ಆಚರಣೆಯಲ್ಲಿ ಪಾಲ್ಗೊಳ್ಳುವ ಜನರು ನೇಕಾರರು ಮತ್ತು ನೇಕಾರರಿಂದ ಸೀರೆಗಳನ್ನು ಖರೀದಿಸಿ ಸಗಟು ವ್ಯಾಪಾರ ಮಾಡುವ ವ್ಯಾಪಾರಸ್ಥರು. ನೇಕಾರರು ಪೂರ್ಣಪ್ರಮಾಣದಲ್ಲಿ ಭಕ್ತಿಭಾವಗಳಿಂದ ಇಲಿಪೂಜೆ ಆಚರಣೆಯನ್ನು ಮಾಡಿದರೆ, ವ್ಯಾಪಾರಿಗಳು ಸಂಕ್ಷಿಪ್ತವಾಗಿ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ವಿಶೇಷವೆಂದರೆ ಯಾವುದೇ ಜಾತಿಗೆ ಸೇರಿದ ನೇಕಾರರು ಈ ಆಚರಣೆಯನ್ನು ನೆಡೆಸಿಕೊಂಡು ಬಂದಿದ್ದಾರೆ.

ಹಬ್ಬದ ದಿನ ಹೋಳಿಗೆ ಕಡ್ಡಾಯವಾಗಿ ತಯಾರಿಸುವ ಸಿಹಿ ಪದಾರ್ಥ. ಬೆಳಿಗ್ಗೆ ಹತ್ತು ಗಂಟೆಗೆ ಹಬ್ಬದ ಅಡುಗೆ ತಯಾರಾಗಿರುತ್ತದೆ. ಅಡಿಗೆ ಸಿದ್ದವಾದ ಕೂಡಲೇ ಮನೆಯ ಯಜಮಾನ ಸ್ನಾನ ಮುಗಿಸಿ ಬೆಲ್ಲದಿಂದ ಇಲ್ಲವೆ ಹೂರಣದಿಂದ ಎರಡು ಇಲಿಗಳನ್ನು ತಯಾರಿಸುತ್ತಾರೆ. ದೇವರ ಗುಡಿಯಲ್ಲಿಟ್ಟು ಹಾಲನ್ನು ಸಂಪ್ರೊಕ್ಷಿಸಿ ಆರತಿ ಬೆಳಗುತ್ತಾರೆ. ಹೀಗೆ ಪೂಜೆ ಮಾಡಿದ ನಂತರ ಅವುಗಳಲ್ಲಿ ಒಂದು ಇಲಿಯನ್ನು ಮಗ್ಗದ(ಪಕ್ಕ) ಬಳಿಯಲ್ಲಿ ಇಡುತ್ತಾರೆ. ಇನ್ನೊಂದು ಇಲಿಯನ್ನು ನಾಗನಂದಿಯ ಮೇಲಿಡುತ್ತಾರೆ. ಹೀಗೆ ಮಾಡುವುದರ ಹಿಂದಿರುವ ಆಶಯ ಜೀವಂತ ಇಲಿಗಳು ಬಂದು ಈ ಇಲಿಗಳನ್ನು ಎಳೆದುಕೊಂಡು ಹೋಗಲಿ ಎಂಬ ಭಾವನೆ. ಮಗ್ಗದ ಬಳಿಯ ಇಲಿಯನ್ನು ಸ್ವಲ್ಪ ಕಾಲದ ಬಳಿಕ ಮನೆಯ ಸದಸ್ಯರು ಪ್ರಸಾದವಾಗಿ ಸ್ವೀಕರಿಸುತ್ತಾರೆ. ಒಂದು ವೇಳೆ ನಾಗನಂದಿಯ ಮೇಲಿನ ಇಲಿ ಹಾಗೆಯೇ ಇದ್ದರೆ ಅದಕ್ಕೂ ಪ್ರಸಾದದ ಗತಿಯೆ. ವ್ಯಾಪಾರಿಗಳ ಮಳಿಗೆಯಲ್ಲಿ ಸೀರೆಗಳನ್ನು ಕೂಡಿಟ್ಟು ಕೋಣೆಗಳ ಸಂಖ್ಯೆಯನ್ನಾಧರಿಸಿ ಈ ಇಲಿಗಳ ಸಂಖ್ಯೆ ನಿರ್ಧಾರವಾಗುತ್ತದೆ. ಹೀಗೆ ಪೂಜೆ ನೆಡೆದ ಬಳಿಕ ಎಲ್ಲರೂ ಊಟಮಾಡಿ ಲೋಕಾಭಿರಾಮದಿಂದ ವಿಹರಿಸುತ್ತಾರೆ.

ಈ ಪೂಜೆಯ ದಿನ ಮಗ್ಗಗಳಿಗೆಲ್ಲ ರಜೆ. ಅಂದು ಯಾರಾದರೂ ಮಗ್ಗದ ಮೇಲೆ ಕೂತು ಕೆಲಸ ಮಾಡಿದರೆಂದರೆ ಇಲಿಗಳು ಬಂದು ಮಗ್ಗಕ್ಕೆ ಹಾಕಿದ ನೂಲನ್ನು ಕಡಿಯುತ್ತವೆ, ಎಂಬ ನಂಬಿಕೆ ಇಲ್ಲಿಯ ನೇಕಾರರದು. ಇಂದಿಗೂ  ಇದು ಬಲವಾದ ನಂಬಿಕೆಯಾಗಿ ಉಳಿದು ಬಿಟ್ಟಿದೆ. ಇಲಿ ಪೂಜೆಯನ್ನು ಹೊರತುಪಡಿಸಿದರೆ ಮಗ್ಗಗಳಿಗೆ ರಜೆ ನೀಡುವುದು ನೂಲು ಹುಣ್ಣಿಮೆಯ ದಿನದಂದು ಭ್ರಾತೃತ್ವದ ಸಂಕೇತವಾದ ಈ ಹಬ್ಬವನ್ನು ನೂಲಿನ ಒಡನಾಟದಲ್ಲಿ ಬದುಕುತ್ತಿರುವ ನೇಕಾರರು ಭಕ್ತಿ ಗೌರವಗಳಿಂದ ಆಚರಿಸುತ್ತಾ ಬಂದಿದ್ದಾರೆ.

ಈ ಆಚರಣೆ ಸಂಪ್ರದಾಯಿಕವಾಗಿ ಏನನ್ನು ಪ್ರತಿಪಾದಿಸಿದರೂ ಇದರ ಹಿಂದೆ ಇಲಿಯನ್ನು ಒಲಿಸಿಕೊಳ್ಳುವ ಮನೋಭಾವ ಸ್ಪಷ್ಟವಾಗುತ್ತದೆ. ನೇಕಾರರು ವೃತ್ತಿಗೆ ಇಲಿ ಮಾರಕವಾಗ ಬಲ್ಲ ದೆಂಬುದನ್ನು ಊಹಿಸಿಕೊಂಡರೆ ಈ ಪೂಜೆಯ ಹಿಂದಿರುವ ಮನಸ್ಥಿತಿ ಅರ್ಥವಾಗುತ್ತದೆ. ಅವುಗಳನ್ನು ಸಂತೃಪ್ತಿಗೊಳಿಸಿ ನೇಕಾರರು ತಮ್ಮ ಕೆಲಸ ಸುಗಮವಾಗಲಿ ಎಂಬ ಮನೋಭಾವ ಇಲ್ಲಿಯದು.

ದುಬಾರಿ ಬೆಲೆಯ ಸೀರೆಗಳನ್ನು ಇಲಿಗಳು ಕಡಿದು ಹಾಕಿದರೆ ಅದರಿಂದ ಆರ್ಥಿಕ, ದೈಹಿಕ ಹಾಗೂ ಸಮಯವೆಲ್ಲವೂ ವ್ಯರ್ಥವಾಗಿ ಹೋಗುತ್ತದೆ ಈ ಕಾರಣಕ್ಕಾಗಿ ದುಷ್ಟಶಕ್ತಿಗಳನ್ನು ಒಲಿಸಿಕೊಳ್ಳುವ ಮನುಷ್ಯನ ಪ್ರಯತ್ನದ ಫಲವಾಗಿ ಇಲಿಪೂಜೆಯಂಥ ಆಚರಣೆಗಳು ಸಾಂಸ್ಕೃತಿಕವಾಗಿ ಬೆಳೆದು ಬಂದಿದೆ. ಅದೇನೇ ಇದ್ದರೂ ಇಳಕಲ್ಲ ಸೀರೆಯ ಹಿನ್ನೆಲೆಯಲ್ಲಿ ಈ ಸಮುದಾಯದಲ್ಲಿ ಹುಟ್ಟಿಕೊಂಡಿರುವ "ಇಲಿ ಹಬ್ಬ" ಪ್ರಾಚೀನ ಕರ್ನಾಟಕದ ಬೇರೆ ಬೇರೆ ಹಬ್ಬಗಳಂತೆ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಇಲಿ ಪೂಜೆಯನ್ನು ಬಿಟ್ಟರೆ ಇಲ್ಲಿ ಚಿತ್ತರಗಿ ಮಹಾಂತ ಸೇವಾ ಜಾತ್ರೆ. ಅಲ್ಲಿ ನಡೆಯುವ ಹಗ್ಗದ ಸೇವೆ ಅಡ್ಡಪಲ್ಲಕ್ಕಿ ಚಾಮರಸೇವೆ ವೀರಗಾಸೆ ಮತ್ತು ಬನಶಂಕರಿ ಜಾತ್ರೆ ಮುಂತಾದವುಗಳೊಂದಿಗೆ ಇಲ್ಲಿಯ ನೇಕಾರರ ಭಾವನಾತ್ಮಕ ಸಂಬಂಧವನ್ನು ಪಡೆದುಕೊಂಡಿದ್ದಾರೆ. ಸೀರೆ ತಯಾರಾದ ಕೂಡಲೇ ಅದನ್ನು "ಮೀಸಲು ಸೀರೆ" ಎಂಬ ಭಾವನೆಯಿಂದ ಗಳಿಗೆ ಮಾಡಿ ಗ್ರಾಮದೇವತೆಯಾದ ಬನಶಂಕರಿಗೆ ಪೂಜೆ ಸಲ್ಲಿಸಿ ಅರ್ಪಿಸುವ ಪರಿಪಾಠ ಇಲ್ಲಿದೆ. ಇಳಕಲ್ಲಿನಲ್ಲಿ ಮುಸ್ಲಿಂ-ಸಮುದಾಯದವರು ಹೆಚ್ಚು ಇದ್ದು, ಅನೇಕ ದರ್ಗಾ ಮಸೀದಿಗಳು ವೈಶಿಷ್ಟ್ಯತೆಯಿಂದ ಕೂಡಿವೆ. ಬಹುತೇಕ ಮುಸ್ಲಿಂ ಜನಾಂಗದವರು ನೇಕಾರಿಕೆ ವೃತ್ತಿಯಲ್ಲಿ ತೊಡಗಿಸಿಕೊಂಡವರಾಗಿದ್ದಾರೆ. ಹೀಗಾಗಿ ಅತ್ತ ಇಲಿಪೂಜೆ, ಇತ್ತ, ಉರುಸು ಮತ್ತೊಂದು ಕಡೆ ಬನಶಂಕರಿದೇವಿಯ ಆರಾಧನೆ ಹೀಗೆ ಬಹು ಸಂಸ್ಕೃತಿಯ ಸಮ್ಮಿಳಿತ

ಜೀವನವನ್ನು ಇಳಕಲ್ಲ ನೇಕಾರಿಕೆ ಉದ್ಯಮೆ ರೂಪಿಸಿಕೊಟ್ಟಿರುವುದು ನಮ್ಮ ಸಾಂಸ್ಕೃತಿಕ ಚಹರೆಗಳಲ್ಲಿ ವಿಶಿಷ್ಟವಾದುದು.

ನೀಲಿ ಕೆಟ್ಟ ಸುದ್ದಿ ಎಂಬ ಮತ್ತೊಂದು ನಂಬಿಕೆ ನಮ್ಮ ನಾಡಿನಲ್ಲಿ ಪ್ರಚಲಿತದಲ್ಲಿದೆ. ಇದರರ್ಥ ಬಹುಶಃ ನೇಕಾರರು ನೀಲಿ ಬಣ್ಣ ತಯಾರಿಸುವಾಗ ಅದು ಕೆಟ್ಟಾಗ ಗಂಡಾಂತರಕಾರಿ ಸುದ್ದಿಯನ್ನು ಹರಡಿಸುತ್ತಾರೆಂಬ ಪ್ರತೀತಿ ಬಹುಕಾಲದಿಂದಲೂ ಬಳಕೆಯಲ್ಲಿದೆ.

## ೪.೪ ಗಾದೆ – ಪಡಿನುಡಿಗಳು

ಜಾನಪದ ಬದುಕಿನಲ್ಲಿ ಗಾದೆಪಡಿನುಡಿ, ಒಗಟು ಮುಂತಾದ ಸಾಹಿತ್ಯ ಪ್ರಕಾರಗಳು ಅವರ ಅಗಾಧ ಜೀವನಾನುಭವಗಳನ್ನು ಕ್ರೋಢೀಕರಿಸಿಕೊಂಡು ಸೃಷ್ಠಿಯಾಗಿವೆ. ಅವುಗಳಲ್ಲಿ ಸಮಾಜದಲ್ಲಿ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಜೀವನವನ್ನು ಎರಕ ಹೊಯ್ದಿರುವುದು ತಿಳಿದು ಬರುತ್ತದೆ. ದಿನನಿತ್ಯ ನಾವು ಧರಿಸುವ ಉಡುಪುಗಳ ಕುರಿತಾಗಿ ಅನೇಕ ರೀತಿಯ ಗಾದೆ ಒಗಟುಗಳು ಸ್ಪಷ್ಟವಾಗಿವೆ. ಇಳಕಲ್ಲ ಸೀರೆಗಳ ಸಾಂಸ್ಕೃತಿಕ ಅಧ್ಯಯನವನ್ನು ಕುರಿತಂತೆ ವಿವೇಚಿಸುವಾಗ ನೇಕಾರ ವೃತ್ತಿಯ ಕೆಲವು ಗಾದೆಗಳು ಸೃಷ್ಟಿಯಾಗಿರುವುದನ್ನು ಡಾ. ಮಹೇಶ ತಿಪ್ಪಶೆಟ್ಟಿಯವರು ಇಳಕಲ್ಲ ಸೀರೆ ಎಂಬ ಕೃತಿಯ ಅನುಬಂಧದಲ್ಲಿ ನೀಡಿದ್ದಾರೆ. ಅವುಗಳು ಈ ಕೆಳಗಿನಂತಿವೆ.

1. ನೇಕಾರನ ಹೆಂಡತಿ ಬತ್ತಲೆ
2. ಒಂದು ಆಣೆ ತಪ್ಪಿದರೆ ಸಾವಿರ ಆಣೆ ತಪ್ಪುತ್ತದೆ.
3. ಜಾಡನ್ನ ಬಿಟ್ಟು ನೋಡು ಮಂಗನ್ನ ಕಟ್ಟಿ ನೋಡು
4. ಜಾಡ ದೈವ ಅಲ್ಲ ಕೋಣ ಬಸವಣ್ಣನಲ್ಲ
5. ಲಾಳಿ ಮೇಲೆ ಲಾಳಿ ಒಗೆದರೆ ಬ್ಯಾಳಿ ರೊಟ್ಟಿಗೆ ಚಿಂತೆ ಇಲ್ಲ
6. ನೇಯ್ದದ್ದೇ ಸೀರೆ ಉಳಿದದ್ದೇ ಕರಿ
7. ನೇಯ್ದರೆ ಬಟ್ಟೆ ಕಟ್ಟಿದರೆ ಮಟ್ಟಿ
8. ನೇಯ್ಗೆ ನೇಯ್ದರೆ ಕೂಡಿತ್ತಲ್ಲದೆ ನೆಗೆದರೆ ಕೊಡೀತೆ
9. ನೇಯ್ಗೆ ನಯವಿದ್ದರೆ ನಾಣ್ಯ ಸಿಕ್ಕೀತು
10. ನೇಯುವವನ ಕೈ ಓದುವವನ ಬಾಯಿ ಚುರುಕಾಗಿರಬೇಕು

11. ನೇಯ್ಗೆಯವನ ಮಟ್ಟ ಕಟ್ಟುವವ ಬಲ್ಲ

12. ನೇಯ್ಗೆಯವನಿಗೆ ಯಾಕೆ ಕೋತಿ ಮರಿ ?

13. ನೇಯುವವನಿಗೆ ಲಾಳಿ ನಗಕ್ಕೆ ಗಾಳಿ

14. ನೂತದ್ದೆಲ್ಲಾ ಹಂಜಿ ಕಲಿತದ್ದೆಲ್ಲಾ ಗಂಜಿ

15. ನೂಲಿಗೆ ತಕ್ಕ ಸೀರೆ ಸಾಲಿಗೆ ತಕ್ಕ ಎಡೆ

16. ನೂಲು ಹಿಡಿದು ಜೋಲುವವನ ಕಾಲು ಹಿಡಿದು ನೇತಾಡಿದ

17. ನೂಲೊ ಹೆಂಡತಿ ಬಿಟ್ಟು ಹೇಲೋ ಮಾಳಿಯ ತಂದ

18. ಕುಣಿಯಲ್ಲಿ ಕೂತವ ಹೆಣ ಅಲ್ಲ ಬಟ್ಟೆ ಹರಿಯುವ ಹುಚ್ಚನಲ್ಲ

19. ತಾಯಿಯಂತೆ ಮಗಳು ನೂಲಿನಂತೆ ಸೀರೆ

20. ಅಜ್ಜಿ ನೋತದ್ದು ಮೊಮ್ಮಗನ ಉಡದಾರಕ್ಕೆ

ಈ ಮೇಲಿನ ವೃತ್ತಿಗಾದೆಗಳು ಅವರ ದೈನಂದಿನ ಬದುಕನ್ನು ಚಿತ್ರಿಸುತ್ತವೆ. ನೇಕಾರನ ಹೆಂಡತಿ ಬತ್ತಲೆ ಎನ್ನುವ ಈ ಗಾದೆ ಬಹುಶಃ ಅವನ ಉಪಜೀವನದಲ್ಲಿ ಲಾಭದಾಯಕವಲ್ಲದ ವೃತ್ತಿಯಾಗಿರುವುದರಿಂದ ಇಲ್ಲವೇ ಬೇರೆಯವರಿಗೆ ಮಾನರಕ್ಷಣೆಗಾಗಿ ಉಡುಪನ್ನು ಸಿದ್ದಗೊಳಿಸುವ ಈತನು ತನ್ನ ಬದುಕಿಗೆ ಯಾವುದೇ ಜೀವರಕ್ಷೆ ಇಲ್ಲದಿರುವುದು ತಿಳಿದು ಬರುತ್ತದೆ. ಅಂದರೆ ಇವರ ಆರ್ಥಿಕ ಸ್ಥಿತಿಗತಿಯಲ್ಲಿ ನಿರ್ಗತಿಕ ಬದುಕನ್ನು ಪ್ರತಿನಿದಿಸುವ ಮಾತು ಇದಾಗಿದೆ. ಇನ್ನೊಂದು ಕಡೆ ಮಾಧ್ಯಮ ಬದುಕನ್ನು ಸಾಗಿಸಲು ನೇಕಾರರಿಗೆ ಯಾವುದೇ ತೊಂದರೆ ಇಲ್ಲ ಎಂಬುದನ್ನು "ಲಾಳಿಮ್ಯಾಲೆ ಲಾಳಿ ವಗೆದರೆ ಬ್ಯಾಳಿರೊಟ್ಟಿಗೆ ಚಿಂತೆಯಿಲ್ಲ" ಎಂಬ ಮಾತಿನಲ್ಲಿ ಅಡಕವಾಗಿದೆ. ಹಾಗೆಯೇ ಈ ವೃತ್ತಿ ಪರಿಶ್ರಮವನ್ನು ಕಾಯಕ ಪ್ರಜ್ಞೆಯನ್ನು ಬಯಸುತ್ತದೆ. ಹೀಗಾಗಿ "ನೇಯ್ದರೆ ಬಟ್ಟೆ ಕಟ್ಟಿದರೆ ಮಟ್ಟ" ಹಾಗೂ "ನೇಯಗೆ ನೇಯ್ದರೆ ಕೂಡಿತಲ್ಲದೇ ನೆಗೆದರೆ ಕೂಡಿತೇ" ಎಂಬ ಮಾತುಗಳನ್ನು ಇಲ್ಲಿ ಗಮನಿಸಬಹುದು. ಜೀವನದ ಆರಂಭದ ದಿನಮಾನಗಳಲ್ಲಿ ಹುರುಪಿನಿಂದ ಕೆಲಸ ಮಾಡಿದ ಮಾನವ ವಯೋವೃದ್ದನಾಗಿ ಕುಳಿತಾಗ ಆತನ ದುಡಿಮೆ ಎಲ್ಲರಿಗೂ ಸಾಕಾಗುವಷ್ಟು ಆರ್ಥಿಕ ಸಂಪತ್ತನ್ನು ತಂದು ಕೊಡಲಾಗದು. ಈ ಹಿನ್ನೆಲೆಯಲ್ಲಿ ಪ್ರಾಯಶಃ ಹುಟ್ಟಿಕೊಂಡ ಗಾದೆಮಾತು "ಅಜ್ಜನೇಯ್ದಿದ್ದು ಮೊಮ್ಮಗನ ಉಡದಾರಕ್ಕೆ" ಎಂಬುದಾಗಿದೆ. ಹಾಗೆಯೇ ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎಂಬ ಗಾದೆಯಂತೆ "ತಾಯಿಯಂತೆ ಮಗಳು ನೂಲಿನಂತೆ ಸೀರೆ" ಎಂಬ ಮಾತು ಪ್ರಚಲಿತದಲ್ಲಿದೆ. ಸೀರೆ ಮೌಲಿಕವಾಗಿ ಬೆಲೆಯುಳ್ಳದ್ದಾಗಿರಬೇಕಾದರೆ ಅದರ ಕಚ್ಚಾ ಸಾಮಗ್ರಿಯಾದ

ನೂಲು ಕೂಡ ಅಷ್ಟೆ ಬೆಲೆಯುಳ್ಳದ್ದಾಗಿರಬೇಕು. ಎಂಬ ವಿಚಾರ ಇಲ್ಲಿಯದು ಅದನ್ನೇ ಇನ್ನೊಂದು ಗಾದೆಯಲ್ಲಿ "ನೂಲಿಗೆ ತಕ್ಕಸೀರೆ ಸಾಲಿಗೆ ತಕ್ಕ ಎಳೆ" ಎಂಬ ನಾಣ್ನುಡಿ ಪ್ರಚಲಿತದಲ್ಲಿದೆ.

ನೇಕಾರರಿಗೆ ಅವಿಭಕ್ತ ದುಡಿಮೆ ಅಪೇಕ್ಷಣೀಯ ಹೀಗಾಗಿ ಮನೆ ಮಂದಿಯಲ್ಲಾ ಈ ದುಡಿಮೆಯಲ್ಲಿ ಪಾಲ್ಗೊಳ್ಳುವುದು ಅನಿವಾರ್ಯ. ಇಂಥ ಅನಿವಾರ್ಯತೆಯಲ್ಲಿ ಕುಟುಂಬದ ಸದಸ್ಯಳಾಗಿ ಬರುವ ಹೊರಗಿನ ಸ್ತ್ರೀ ನೇಕಾರಿಕೆಯನ್ನು ಮೈಗೂಡಿಸಿಕೊಳ್ಳಬೇಕಾಗುತ್ತದೆ. ಆದರೆ ಕೆಲವು ಜನರು ಈ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳದೇ ಹೋದಾಗ "ನೂಲೋ ಹೆಂಡತಿಯ ಬಿಟ್ಟು ಹೇಲೋ ಮಾಳಿಯ ತಂದ" ಎಂಬ ಗಾದೆ ಪ್ರಚಲಿತಕ್ಕೆ ಬಂದಿತು. ಕೈ ಮಗ್ಗಗಳ ವಿನ್ಯಾಸದಲ್ಲಿ ಕುಣಿಯು ಒಂದು. ಈ ಕುಣಿಯಲ್ಲಿ ಕೂತು ಸೀರೆ ನೇಯ್ಯುವವನನ್ನು ಕುರಿತಂತೆ "ಕುಣಿಯಲ್ಲಿ ಕೂತವ ಹೆಣ ಅಲ್ಲ ಬಟ್ಟೆ ಹರಿಯುವವ ಹುಚ್ಚನಲ್ಲ." ಎಂಬಗಾದೆ ಹುಟ್ಟಿಕೊಂಡಿತು. ಹೀಗೆ ನೇಕಾರಿಕೆ ಕುರಿತು ಇಳಕಲ್ಲ ಭಾಗದಲ್ಲಿ ಅವುಗಳ ಸಾಂಸ್ಕೃತಿಕ ಅಧ್ಯಯನದ ಅಗತ್ಯ ಇಂದು ಸಮುದಾಯ ಅಧ್ಯಯನಗಳಲ್ಲಿ ಅವಶ್ಯವಾಗಿ ನಡೆಯಬೇಕಾಗಿದೆ.

## ಅಡಿ ಟಿಪ್ಪಣಿಗಳು

೧. ಕರ್ನಾಟಕ ಜನಪದ ಚಿತ್ರಕಲೆ ಡಾ. ಎಸ್.ಸಿ.ಪಾಟೀಲ ಪು. ೧೫೩

೨. ಕರ್ನಾಟಕ ಜನಪದ ಚಿತ್ರಕಲೆ ಡಾ. ಎಸ್.ಸಿ.ಪಾಟೀಲ ಪು. ೧೫೩

೩. ಕರ್ನಾಟಕ ಜನಪದ ಚಿತ್ರಕಲೆ ಡಾ. ಎಸ್.ಸಿ.ಪಾಟೀಲ ಪು. ೧೫೩

೪. ಇಳಕಲ್ಲ ಸೀರೆ ಬಣ್ಣ ಹಾಗೂ ವಿನ್ಯಾಸ: ಒಂದು ಅಧ್ಯಯನ ಡಾ.ಕಂದಗಲ್ಲ ಪಿ.ಎಸ್(ಅಪ್ರಕಟಿತ) ಪು.೧೦೧

೫. ಇಳಕಲ್ಲ ಸೀರೆ ಬಣ್ಣ ಹಾಗೂ ವಿನ್ಯಾಸ: ಒಂದು ಅಧ್ಯಯನ ಡಾ.ಕಂದಗಲ್ಲ ಪಿ.ಎಸ್(ಅಪ್ರಕಟಿತ) ಪು ೧೦೧

೬. ಇಳಕಲ್ಲ ಸೀರೆ ಬಣ್ಣ ಹಾಗೂ ವಿನ್ಯಾಸ: ಒಂದು ಅಧ್ಯಯನ ಡಾ.ಕಂದಗಲ್ಲ ಪಿ.ಎಸ್(ಅಪ್ರಕಟಿತ) ಪು..೧೦೧

೭. ಇಳಕಲ್ಲ ಸೀರೆ ಬಣ್ಣ ಹಾಗೂ ವಿನ್ಯಾಸ: ಒಂದು ಅಧ್ಯಯನ ಡಾ.ಕಂದಗಲ್ಲ ಪಿ.ಎಸ್(ಅಪ್ರಕಟಿತ) ಪು..೧೦೧

# ಅಧ್ಯಾಯ : ಐದು

## ಸಮಾರೋಪ

ಸಂಸ್ಕೃತಿ ಎನ್ನುವುದು ಮನುಷ್ಯನ ಜೀವನ ಪದ್ಧತಿ ಇದಕ್ಕೆ ಸಾರ್ವತ್ರಿಕ, ಸಾರ್ವಕಾಲಿಕ ಮಹತ್ವ ಇರುತ್ತದೆ. ಕರ್ನಾಟಕ ಇತಿಹಾಸದಲ್ಲಿ ಕಲೆಯನ್ನು ಸಂಸ್ಕೃತಿಯ ಪರಿಧಿಯಲ್ಲಿ ಅಧ್ಯಯನ ಮಾಡುತ್ತಾ ಬಂದಿದ್ದೇವೆ. ಈ ದೃಷ್ಟಿಯಿಂದ ಚಿತ್ರಕಲೆ, ಶಿಲ್ಪಕಲೆ, ಕರಕುಶಲಕಲೆಗಳ ಒಂದು ಪರಂಪರೆಯೆ ಬೆಳೆದು ಬಂದಿದೆ. ಮಾನವ ತನ್ನ ಕಲೆಯ ಅಭಿವ್ಯಕ್ತಿಗಾಗಿ ಅನೇಕ ಮಾದ್ಯಮಗಳನ್ನು ಆಶ್ರಯಿಸಿದ್ದಾನೆ. ಮಣ್ಣು, ಮರ, ಶಿಲೆ, ಲೋಹ ಮುಂತಾದವುಗಳ ಜೊತೆಗೆ ಬಟ್ಟೆಯ ಮಾದ್ಯಮವು ಒಂದು. ಈ ಹಿನ್ನೆಲೆಯಲ್ಲಿ "ಇಳಕಲ್ಲಸೀರೆ" ಬಟ್ಟೆ ಮಾದ್ಯಮಗಳಲ್ಲಿ ಮೂರ್ತಗೊಂಡ ಒಂದು ಕಲೆಯಾಗಿದೆ. ಹಾಗೆ ನೋಡಿದರೆ ನೂಲಿನಿಂದ ಹೆಣೆಯುವ ಮತ್ತು ಬಟ್ಟೆಯ ಮೇಲೆ ಬಣ್ಣದಿಂದ ಬಿಡಿಸುವ ಎರಡು ಪ್ರಕಾರಗಳಲ್ಲಿ ಈ ಬಟ್ಟೆಯ ಕಲೆ ಬೆಳೆದು ಬಂದಿದೆ. ಇದರಲ್ಲಿ ಕಚ್ಚಾ ಸಾಮಗ್ರಿಯಾದ ನೂಲನ್ನು ಬಳಸಿಕೊಂಡು ಅದಕ್ಕೆ ಬಣ್ಣ ಎದ್ದುವ, ಬಣ್ಣ ತಯಾರಿಸುವ, ಬಣ್ಣಸಂಯೋಜಿಸುವ ನೈಪುಣ್ಯತೆಯನ್ನು ಹಿಡಿದು ಸಿದ್ದಗೊಂಡ ಬಣ್ಣದ ನೂಲುಗಳನ್ನು ಹಾಸು ಹೊಕ್ಕು ಕೌಶಲದಿಂದ ಬಟ್ಟೆಗಳನ್ನು ಸಿದ್ದಗೊಳಿಸುವ ಉದ್ಯಮ "ನೇಕಾರಿಕೆ" ಎಂಬ ವೃತ್ತಿಯನ್ನು ಮತ್ತು ನೇಕಾರರು ಎಂಬ ಜನ ಸಮುದಾಯವನ್ನು ಸೃಷ್ಟಿಸಿದೆ.

ಕರ್ನಾಟಕ, ಕರ್ನಾಟಕೇತರ ಭಾಗಗಳಲ್ಲಿ ಸೀರೆ ತಯಾರಿಸುವ ಕುಶಲ ಕರ್ಮಿಗಳ ವರ್ಗ ಅಪಾರವಾಗಿ ಕಂಡು ಬರುತ್ತದೆ. ಅವುಗಳಿಗೆ ಅವುಗಳದೇ ಆದ ಮಹತ್ವ ಇರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಇಂತಹ ಮಹತ್ವವನ್ನು ಪಡೆದಿರುವ ಇಳಕಲ್ಲಸೀರೆ ರಾಷ್ಟ್ರವ್ಯಾಪಿ ಖ್ಯಾತಿಯನ್ನು ಪಡೆದಿದೆ. ಈ ದೃಷ್ಠಿಯಿಂದ ಅವುಗಳನ್ನು ಕುರಿತು ಸಾಂಸ್ಕೃತಿಕ ಅಧ್ಯಯನ ಮಾಡುವುದು ಅತ್ಯಂತ ಜರೂರಿನ ಕೆಲಸವೇ ಸರಿ.

ಈಗಾಗಲೇ ಅಧ್ಯಯನದ ಉದ್ದೇಶದಲ್ಲಿ ಹೇಳಿರುವಂತೆ ಕರ್ನಾಟಕದ ಕೆಲವು ಪ್ರದೇಶಗಳು ಅವು ಉತ್ಪಾದಿಸುವ ವಸ್ತುವಿನಿಂದ ಪ್ರಸಿದ್ಧಿ ಹೊಂದಿವೆ. ಉದಾ:ಮಂಗಳೂರು ಹಂಚು, ಗುಳೇದಗುಡ್ಡದ ಖಣ, ಬೆಳಗಾವಿ ಕುಂದ, ಸವಣೂರು ಖಾರ, ಅಮೀನಗಡದ ಕರ್ದಂಟು, ಮುಧೋಳ ನಾಯಿ ಇತ್ಯಾದಿಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಉಪಜೀವನಕ್ಕಾಗಿ ಇವುಗಳ ಉತ್ಪಾದನೆಯಲ್ಲಿ ನಿರತರಾದ ಜನವರ್ಗವನ್ನು ಕುರಿತು ಅನೇಕ ಜನ ವಿದ್ವಾಂಸರು ಅಧ್ಯಯನ ಮಾಡುವಷ್ಟು ಆಕರ ಸಾಮಗ್ರಿ ಕ್ರೋಢೀಕೃತವಾಗಿದೆ. ಇವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಿನ್ನೆಲೆಯಲ್ಲಿ ಅಧ್ಯಯನ ಮಡುವ ಅಗತ್ಯವನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ಹಾಗೆಯೇ ಇವರ ಜೀವನ ಪದ್ದತಿ ಎನಿಸಿಕೊಂಡ ಸಾಂಸ್ಕೃತಿಕ ಅನನ್ಯತೆಯನ್ನು ಅಧ್ಯಯನ ಮಾಡದೇ ಹೋದರೆ ಭವಿಷ್ಯತ್ತಿನಲ್ಲಿ ಇವರ ಚರಿತ್ರೆ ಮರೆಯಾಗಬಹುದು. ಈ ಎಲ್ಲ ಉದ್ದೇಶಗಳ ಹಿನ್ನೆಲೆಯಲ್ಲಿ ಕೈಗೊಂಡ ಸಾಂಸ್ಕೃತಿಕ ಅಧ್ಯಯನವಾಗಿದೆ ಇಳಕಲ್ಲ ಸೀರೆ: ಸಾಂಸೃತಿಕ ಅಧ್ಯಯನವೆಂಬ ಕಿರುಪ್ರಬಂಧ.

ಇಳಕಲ್ಲ ಔದ್ಯೋಗಿಕವಾಗಿ ಗ್ರಾನೈಟ್ ಮತ್ತು ಉದ್ಯಮದಲ್ಲಿಯೂ ಮುಂಚೂಣಿಯಲ್ಲಿದೆ ಇಲ್ಲಿಯ ನೇಕಾರರಿಗೆ ಪೌರಾಣಿಕ, ಐತಿಹಾಸಿಕ, ಹಿನ್ನೆಲೆ ಇರುವುದಕ್ಕೆ ದೇವಾಂಗ ಪ್ರಕಾಶನದಂತಹ ಧಾರ್ಮಿಕ ಗ್ರಂಥ ಇರುವುದನ್ನು ಅನುಲಕ್ಷಿಸಬೇಕು. ನೇಕಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಈ ಜನಾಂಗದ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಇಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಇಳಕಲ್ಲಿನ ಮಗ್ಗಗಳನ್ನು ಗಾಂಧೀಜಿಯವರ ಗುಡಿಕೈಗಾರಿಕೆಗಳ ಪ್ರಮುಖ ಸಾಧನಗಳು. ಇವುಗಳ ಬಳಕೆಯ ಜೊತೆಗೆ ಕೌಟಂಬಿಕವಾದ ಅವಿಭಕ್ತಪ್ರಜ್ಞೆ ಸಾಮಾಜಿಕವಾದ ಸೌಹಾರ್ದ ಜೀವನ ಇವುಗಳನ್ನು, ಕಟ್ಟಿಕೊಡಲು ಸಾಧ್ಯವಿದೆ. ಈ ದೃಷ್ಠಿಯಿಂದ ಸಾಂಸ್ಕೃತಿಕ ಚಟುವಟಿಕೆಗಳ ಬೆಳವಣಿಗೆಗೆ ಒಂದು ಸಮೂಹ ಪ್ರಜ್ಞೆ ಬೆಂಗಾವಲಾಗಿ ನಿಲ್ಲಬೇಕೆಂಬುದನ್ನು ಇಂಥ ಅಧ್ಯಯನಗಳಿಂದ ಸಮಾರೋಪಿಸಬಹುದಾಗಿದೆ.

"ಇಳಕಲ್ಲ ಸೀರೆ" ಕೇವಲ ಒಂದು ವಸ್ತುವಾಗಿ ನಮಗೆ ಗೋಚರಿಸಬಾರದು ಮತ್ತು ಹಾಗೇ ಗೋಚರಿಸಿಲ್ಲ, ಅದೊಂದು ಸಾಂಸ್ಕೃತಿಕ ಅನನ್ಯತೆಯ ಪ್ರತೀಕ. ಅದು ಸಿದ್ಧಗೊಳ್ಳುವ ಹಿನ್ನೆಲೆಯಲ್ಲಿ ರೂಪಿತವಾಗುವಂತಹ ಕಚ್ಚಾಸಾಮಗ್ರಿಗಳು ಅವುಗಳ ತಯಾರಿಕೆ ಮತ್ತು ವೈವಿಧ್ಯತೆ ಇವುಗಳ ಹಿಂದಿರುವ ಕುಶಲಕಲೆಯನ್ನು ಗಮನಿಸಿರುವುದು ಈ ಅಧ್ಯಯನದ ಬಹುಮುಖ್ಯ ಆಶಯವಾಗಿದೆ.

ಸೀರೆಗಳ ಬಣ್ಣಗಳು ಅವುಗಳ ತಯಾರಿಕೆ, ಹಾಗೂ ಸಂರಕ್ಷಣೆ ಮುಂತಾದ ಸಂಗತಿಗಳು ಇಲ್ಲಿ ಕುತೂಹಲಕಾರಿಯಾಗಿವೆ.ಉಡುಗೆಯಾಗಿ ಬಳಕೆಯಾಗುವ ಸೀರೆ ಬೇರೆ ಬೇರೆ ಅಂಗಾಂಗಗಳನ್ನು ಪಡೆದುಕೊಂಡಿರುತ್ತದೆ. ಬಹುಮುಖ್ಯವಾಗಿ ವಡ್ಲು, ದಡಿ, ಸೆರಗು, ಇವುಗಳವಿನ್ಯಾಸದಲ್ಲಿ ಇಳಕಲ್ಲ ನೇಕಾರರು ಸಾಧಿಸಿದ ಸಾಧನೆ ಅದ್ವಿತೀಯವಾದುದು. ಅನೇಕ ತಾಂತ್ರಿಕ ಮತ್ತು ತಾತ್ವಿಕ ಸಿದ್ಧಾಂತಗಳನ್ನು ಇರಿಸಿಕೊಂಡು ಇವುಗಳ ವಿನ್ಯಾಸವನ್ನು ರೂಪಿಸಿದ್ದಾರೆ. ದೇಶೀಯ ಪದಗಳಾದ ರಾಗವಳಿ ಚಿಕ್ಕಿ, ಕಡ್ಡಿ, ಪಂಚರಂಗಿ ಇತ್ಯಾದಿ ಹೆಸರುಗಳಿಂದ ಕರೆಯುವುದರ ಮೂಲಕ ಸೀರೆಗಳಿಗೆ ಕರ್ನಾಟಕತ್ವವನ್ನು ತಂದು ಕೊಟ್ಟಿದ್ದಾರೆ.

ಇಳಕಲ್ಲ ಸೀರೆ ಕೇಂದ್ರಿತವಾಗಿ ಕೆಲವು ಆಚರಣೆನಂಬಿಕೆಗಳನ್ನು ಕಂಡು ಕೊಳ್ಳಬಹುದಾಗಿದೆ. ಪ್ರತಿವರ್ಷ ಅಲ್ಲಿ ನಡೆಯುವ ಇಲಿಪೂಜೆ ವಿಶೇಷತೆಯಿಂದ ಕೂಡಿದ ಕುತೂಹಲಕಾರಿ ಹಬ್ಬವಾಗಿದೆ. ಹಾಗೆಯೇ "ನೀಲಿ ಕೆಟ್ಟ ಸುದ್ದಿ" ಎಂಬ ಮಾತು ಆಗಾಗ ಕೇಳಿ ಬರುತ್ತದೆ. ನೀಲಿಬಣ್ಣ ತಯಾರಿಸುವಾಗ ಬಣ್ಣ ಕೆಟ್ಟರೆ ಅಗಾಧವಾದ ಕೆಟ್ಟ ಸುದ್ದಿಯನ್ನು ಹೊರಡಿಸುವ ನಂಬಿಕೆ ಮೊದಲಿನಿಂದಲೂ ಇದ್ದಂತೆ ತೋರುತ್ತದೆ. ಎಲ್ಲರಿಗೂ ಪ್ರೀಯವಲ್ಲದ, ಎಲ್ಲರೂ ಸ್ವೀಕರಿಸಬಾರದ ನೀಲಿ ಕೆಟ್ಟ ಸುದ್ದಿ ನೀಲಿ ಹೊತ್ತಿಗೆ ನಮ್ಮ ಸಾಂಸ್ಕೃತಿಕ ಪರಂಪರೆಯ ಅಸ್ಪಷ್ಟ ಸಂಗತಿಗಳೆನಿಸಿವೆ.

ಸೆರಗಿಗೆ ಸಂಬಂಧಿಸಿದಂತೆ ಸೆರಗು ಹಿಡಿ, ಸೆರಗು ಹಾಸು, ಸೆರಗು ಹರಿ, ಸೆರಗೊಡ್ಡು ಇತ್ಯಾದಿ ಪರಿಭಾಷೆಗಳಂತೆ ಉಡಿಯಲ್ಲಿ ಹಾಕಿಕೋ, ವಡ್ಲಿನಲ್ಲಿ ಹಾಕು ಎಂಬಂತಹ ಸೀರೆ ಕೇಂದ್ರಿತವಾದ ಮಾತುಗಳ ಹಿಂದೆ ನಮ್ಮ ಜನರ ಕೆಲವು ಜೀವನ ಚಟುವಟಿಕೆಗಳೇ ಅವಿತುಕೊಂಡಿವೆ. ಅವುಗಳನ್ನೆಲ್ಲಾ ಶೋಧಿಸಿ, ಸೋಸಿ, ಸಾಮಾಜೀಕರಣಗೊಳಿಸುವ ಬಹುಮುಖ್ಯ ಆಶಯ ಈ ಪ್ರಬಂಧದ್ದಾಗಿದೆ. ಹಾಗೆಯೇ ನೇಕಾರಿಕೆ ಸಂಬಂಧಪಟ್ಟ ಗಾದೆ ಮಾತುಗಳು ಪಡಿನುಡಿಗಳಲ್ಲದೆ ಇಳಕಲ್ಲ ನೇಕಾರ ವೃತ್ತಿ ಪದಕೋಶ ಕನ್ನಡ ಶಬ್ದಕೋಶದ ವಿಸ್ತಾರಕ್ಕೆ ಕಾರಣವೂ ಆಗಬಹುದು. ಅಂದರೆ ಈ ರೀತಿಯ ಹಲವು ಸಮುದಾಯದ ವೃತ್ತಿ ಪದಕೋಶದ ಅಗತ್ಯವನ್ನು ಇಂಥ ಅಧ್ಯಯನಗಳಿಂದ ಎತ್ತಿ ಹೇಳಲು ಸಾಧ್ಯವಿದೆ. ಇಳಕಲ್ಲ ಭಾಗದಲ್ಲಿ ಸೀರೆ ಹಳೆಯದಾದಂತೆ ಅದನ್ನೆ ಮುಂದೆ ಕೌದಿಯಾಗಿ ಹೆಣೆಯುವ, ಕೌದಿ

ಹಳೆಯದಾದಾಗ ಅದನ್ನು ಸುಟ್ಟು ಎಣ್ಣೆ ಪುಟ್ಟಿಗೆ ಕಾಡಿಗೆ ಮಾಡಿ ಉಪಯೋಗಿಸುವಲ್ಲಿಯೂ ಇಳಕಲ್ಲ ಸೀರೆಯು ಸಾಂಸ್ಕೃತಿಕವಾಗಿ ಪರಂಪರೆಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿದೆ. ಇದರಿಂದ ಆ ಭಾಗದ ಬಡತನವನ್ನು ನಿರ್ವಚಿಸಬಹುದಾಗಿದೆ.

ಹೀಗೆ ಇಳಕಲ್ಲ ಸೀರೆ ಸಾಂಸ್ಕೃತಿಕ ಅಧ್ಯಯನವೆಂಬ ಈ ಕಿರು ಪ್ರಬಂಧ ಇಳಕಲ್ಲ ನೇಕಾರರ ಭಾಷಿಕ ಪ್ರಾದೇಶಿಕ ಮತ್ತು ಚಾರಿತ್ರಿಕಾಧ್ಯಯನಗಳ ಹಿನ್ನೆಲೆಯಲ್ಲಿ ಒಟ್ಟು "ಸಾಂಸ್ಕೃತಿಕ ಚರಿತ್ರೆ"ಯನ್ನು ನಿರೂಪಿಸುವ ಒಂದು ಪ್ರಯತ್ನವಾಗಿದೆ.

## ಅನುಬಂಧಗಳು : ೧
## ಭಾವಚಿತ್ರಗಳು



ಇಳಕಲ್ಲ ಕೈಮಗ್ಗ



ಹಣಗಿ ಕೆಚ್ಚುವುದು

ಬಾಯಿಯಿಂದ ಅಚಿಟಿನ ನೀರು ಸಿಂಪಡಿಸುವುದು



ನೂಲು ಎಳೆಗಳ ಜೋಡಣೆಯಲ್ಲಿ ನಿರತಳಾದ ಮಹಿಳೆ



ರೇಷ್ಮೇ ನೂಲಿಗೆ ಬಣ್ಣ ಹಾಕುತ್ತಿರುವುದು



ಸೀರೆಗಳ ಸೆರಗಿಗೆ ಚುಂಗು ಕಟ್ಟುತ್ತಿರುವುದು



ಪವರ್‌ಲೂಮನಲ್ಲಿ ಸೀರೆ ತಯಾರಿಕೆ



ನೇಕಾರಿಕೆಯಲ್ಲಿ ತೊಡಗಿಸಿಕೊಂಡಿರುವ ಮುಸ್ಲಿಂ ಕುಟುಂಬ



ಸೀರೆ ನೇಯ್ಗೆಯಲ್ಲಿ ನಿರತನಾದ ನೇಕಾರ



ಬಣ್ಣಗಳ ಆಲ್ಬಾಂ



ಟೋಪ್ ತೆನೆ ಸೀರೆ ಸೆರಗು



ಇಳಕಲ್ಲ ವಿವಿಧ ಸೀರೆಗಳ ವಿನ್ಯಾಸ



ಚಿಕ್ಕಿ ಪರಾಸ್ ದಡಿ ಸಣ್ಣ ಚೆಕ್ಸ್ ಪಂಚರಂಗಿ ಗಾಯತ್ರಿ ದಡಿ ಎಳ್ಳು ಹೂ



ಗಾಡಿದಡಿ ಟೋಪ ತೆನಿ ಸೆರಗು



ಗೊಂಡೆ ಕಟ್ಟಿದ ಇಳಕಲ್ಲ ಸೀರೆಗಳು





ಚಿಕ್ಕಿ ಪರಾಸ್ ದಡಿ ಚೌಕಾಸಿ ವಡ್ಲಸೀರೆ



ಚದುರಂಗ ಚಿಕ್ಕಿ ವಡ್ಲು ಕ್ಯಾದಗಿ ತೆನಿ ಗೋಮಿದಡಿ



ರೇಷ್ಮೆ ನೂಲಿನ ಲಡಿಗಳು



ಗೊಂಡೆ ಕಟ್ಟಿದ ಇಳಕಲ್ಲ ಸೀರೆಗಳು



## ಅನುಬಂಧ ೨

## ಪದಸೂಚಿ

**ಅಚ್ಚಿನ ರೋಲರ್**: ಅಚ್ಚುವು ಮೇಲೆ ಕೆಳಗೆ ಆಡಿಸಲು ಸಹಾಯ ಮಾಡುವ ಮರದ ದುಂಡನೆಯ ದಪ್ಪದಾದ ಕೋಲು ಇದನ್ನು ಮಗ್ಗದ ಕಂಬದ ಮೇಲಿನ ಅಡ್ಡ ಪಟ್ಟಿಗೆ ಕಟ್ಟಲಾಗಿರುತ್ತದೆ.

**ಅಚ್ಚು** : ಮಗ್ಗದ ಹಾಸಿನ ಎಳೆಗಳನ್ನು ಲಾಳಿ ಓಡಾಡಲು ಮೇಲೆ ಕೆಳಗೆ ಮಾಡಲು ಇರುವ ಸಾಧನ

**ಅರದಡಿಗೆ** : ಹಾಸುಗೆ ಆಧಾರವಾಗಿ ಇಟ್ಟಿರುವ ಗೋಲಾಕಾರದ ಕಟ್ಟಿಗೆ ತುಂಡು

**ಅಚ್ಚುಗಾಲಿ** : ಅಚ್ಚನ್ನು ಮೇಲೆ ಕೆಳಗೆ ಮಾಡಲು ಅಚ್ಚಿನ ದುಂಡುಕೋಲು ಮತ್ತು ಅಚ್ಚಿಗೆ ಕಟ್ಟಿರುವ ಮಧ್ಯಗಾಲಿ

**ಅಂಚಿನ** : ಕುಂಡಲಿ: ಅಂಚನ್ನು ಇಟ್ಟಿರುವ ಮಡಿಕೆ

**ಅಣಿಗೆ** : ನೇಯ್ಗೆಯವರ ಮಗ್ಗದ ಅಚ್ಚು

**ಅಣ್ಸು** : ಕಬ್ಬಿಣದ ಮೊಳೆ, ಲಾಳಿಯತುದಿ, ಲಾಳಿಗುಬ್ಬಿ

**ಅಂಬತ್ತಿಗೆ** : (ಅಮ್ಮತ್ತಿಗೆ) ಕಂಬಳಿನೇಯ್ಗೆ ಜಾಡಿಪಟ್ಟಿ ನೇಯ್ಗೆಯಲ್ಲಿ ಹಾಸಿನ ಎಳೆಗಳನ್ನು ಮೇಲೆ ಕೆಳಗೆ ಮಾಡಿಕೊಟ್ಟು ಲಾಳಿ ಹಾಸಿನ ಎಳೆಗಳ ಮಧ್ಯ ಓಡಾಡಲು ದಾರಿ ಮಾಡಿಕೊಡುವ ಮರದ ಸಾಧನ

**ಅರಗಣಿ** : ಹರಿಮಣಿ

**ಉಂಗರ** : ಹರಟೆಯ ತುದಿಯಲ್ಲಿ (ಮೂಗು) ಇರುವ ಕಬ್ಬಿಣದ ಬಳಿ ಸುತ್ತಲೂ ಬಂದು ಸೇರಿರುವ ಬಿದಿರಿನ ಪಟ್ಟಿಗಳನ್ನು ಹಿಡಿದಿಡುವ ಬಳೆ

**ಉಕ್ಕಾ** : ಎಳೆದು ಹಿಡಿದಿರುವಂತೆ ಉಡಾತ್ರ ಬಳೆಯನ್ನು ಕಟ್ಟಲು ಉಪಯೋಗಿಸುವ ಸಣ್ಣ ಹಗ್ಗ

**ಉಕಾರ ಒಲಿ** : ರೇಷ್ಮೆಯ ಅಂಚನ್ನು ತೆಗೆಯಲು ಸೋಪಿನ ದ್ರಾವಣವನ್ನು ಕುದಿಸಲು ಬಳಸುವ ಒಲೆ.

**ಉಡಾತ್ರ** : ಹಾಸುಗೆ ಅಗತ್ಯವಾದ ಎಳಗಳಿಗೆಗೆ ಅಂಚು (ಮೀನಸರಿ) ಹಾಕಿ ಒಡಗಿಸಲು ಮತ್ತು ಹಸ ಮಾಡಿಕೊಳ್ಳಲು ಬಳಸುವ ಸಾಧನ .

**ಉಡಾತ್ರಕಾಲ** : ಉಡಾತ್ರದ ಮರದ ನಿಲುವು ಅಡ್ಡಣಿಗೆ.

**ಉಡಾತ್ರ ಕಿವಿ** : ಉಡಾತ್ರದ ಅಡ್ಡಪಟ್ಟಿಗಳನ್ನು ಮೇಲಿನ ಪಟ್ಟಿಗೆ ಸೇರಿಸುವ ಜಾಗ.

**ಉಡಾತ್ರ** : ಹಾಸುಸಿದ್ಧಪಡಿಸಲು ಉಪಯೋಗಿಸುವ'x' ಆಕಾರದ ಕಟ್ಟಿಗೆ ಸಾಧನ

**ಹುಸುಕಿನ ಹಾಳಿ** : ಲಾಳಿಯ ಬದಿಗಳನ್ನು ನುಣುಪು ಮಾಡಿಕೊಳ್ಳಲು ಬಳಸುವ ಮರಳಿನ ಕಾಗದ

**ಉಸಿ** : ತಟ್ಟಿನ ಒಳಗೆ ಎಳೆ ತುಂಬುವ ಸಾಧನ ತುಂಬುಸೂಜಿ ಮಣಿಗಡ್ಡಿ

ಎಣ್ಣೆಕುಡಕಿ : ಎಣ್ಣೆ ಇಟ್ಟುಕೊಳ್ಳುವ ಮಣ್ಣಿನ ಚಿಕ್ಕಪಾತ್ರೆ

ಎದರಪಟ್ಟಿ : ಪಿಂಜರ (ಗಡಾ) ಕ್ಕೆ ಸೇರಿಸುವ ಮರದ ಪಟ್ಟಿ

ಎಲಿ : ಹರಟೆಯಲ್ಲಿ ಸೇರಿಸುವ ಬಿದಿರಿನ ಪಟ್ಟಿಗಳು. ಹರಟೆಯಲ್ಲಿ ೪ಅಥವಾ ೬ ಪಟ್ಟಿಗಳನ್ನು ಬಳಸಲಾಗುತ್ತದೆ.

ಎಲಿಹುಗುಲು : ರಾಟೆಯಲ್ಲಿ ಕದಿರನ್ನು ಸಿಕ್ಕಿಸಲು ಕೊಟ್ಟಿರುವ ಭಾಗ

ಓಟೆ : ವಿನ್ಯಾಸಕ್ಕೋಸ್ಕರ ತಾಪೀಟಿಗೆ (ಪಿಂಜರಾ) ಸೇರಿಸುವ ಸಣ್ಣಮರದ ತುಂಡುಗಳು

ಕೈಲಾಳಿ : ಸೀರೆಯ ಸೆರಗನ್ನು ನೇಯ್ಯುವಾಗ ಒಂದು ಬದಿಯಿಂದ ಇನ್ನೊಂದು ಬದಿಗೆ ಕೈಯಿಂದ ಚಲಿಸುವ

ಲಾಳಿಕುಂಟ : ಕಟ್ಟಿಗೆಯ ದಿಂಡು : ನೇಯ್ಗೆ ಸೀರೆಯನ್ನು ಸುತ್ತಲೂ ಬಳಸುವ ಸಾಧನ

ಕಿವಿಗೂಟ : ಶೆಟಲ್ ಮುಂದುಗಡೆ ಮಗ್ಗದ ಎರಡು ಬದಿಯಲ್ಲಿ ನೆಲದಲ್ಲಿ ಹೂತ್ತಿರುವ ಕಟ್ಟಿಗೆಯ ಫಳಿ. ಇದರ ಮೇಲೆ ಅರೆದಂಡಿಗೆಯನ್ನು ಕೂಡಿಸಲಾಗಿರುತ್ತದೆ.

ಕೈಗೂಟ : ಮಗ್ಗದ ಬಲಗಡೆ ಅರದಂಡಿಗೆ ಪಕ್ಕದಲ್ಲಿ ನೆಲದಲ್ಲಿ ಹೂತಿರುವ ಕಟ್ಟಿಗೆಯ ಗೂಟ, ನೇಯ್ಗೆಯ ಹಾಸನ್ನು ಹಗ್ಗದಿಂದ ಸಣ್ಣಗೂಟದ ಮುಖಾಂತರ ಈ ಕೈಗೂಟಕ್ಕೆ ಬಲವಾಗಿ ಬಿಗಿಯಲಾಗಿರುತ್ತದೆ.

ಚಿಣೆಗೂಟ : ಮುಂದುಗಡೆ ಮಗ್ಗದ ಎರಡು ಬದಿಯಲ್ಲಿ ನೆಲದಲ್ಲಿ ಹೊತ್ತಿರುವ ಕಟ್ಟಿಗೆಯ ಪಳಿ. ಇದರ ಮೇಲೆ ಅರೆದಂಡಿಗೆಯನ್ನು ಕೂಡಿಸಲಾಗಿರುತ್ತದೆ.

ಟಾಣಕೋಲು : ತವುಣುಕೋಲು ಪಾದಕಕ್ಕೆ ಮತ್ತು ಹಣಗಿ (ಅಚ್ಚು) ಯ ನಡುವೆ ಎರಡನ್ನು ಸೇರಿಸಲಾದ ದುಂಡಾದ ಮರದಕೋಲು

ತರುವುಕೋಲು : ಬಣ್ಣಮಿಶ್ರಣ ಮಾಡಲು ಬಳಸಲು ಇರುವ ಕೋಲು

ದಂಡಗೋಲು : ಅಡಿದಂಡಿಗೆ ಅಥವಾ ದಂಡಿಗೆ ಮರದ ಮುಂದೆ ಇಟ್ಟಿರುವ ಎಳೆಗಳ ಮಧ್ಯ ಎಳೆಗಳು ಗೋಜಲಾಗದಂತೆ ಮಾಡಲು ಸೇರಿಸಿರುವ ಕೋಲು.

ಪಾಂಚಕೋಲು : ಅಣಿ ಬದಲಾವಣಿ ಮಾಡಲು ಉಪಯೋಗಿಸುವ ಹಿಡಿಕೆ.

ಪಿಂಜರ ಕೋಲು : ಪಿಂಜರದಲ್ಲಿ ಸರಪಳಿಯಂತೆ ಜೋಡೊ ಸೊರುವ ಮರದ ಪಟ್ಟಿಗಳು ಪೇಚಿಕೋಲು ಹಣಿಗೆಯ (ಹಚ್ಚು) ಮೇಲ್ಬಾಗ ಮತ್ತು ಕೆಳಭಾಗದಲ್ಲಿ ಕಟ್ಟಿರುವ ಮರದ ಕೋಲು ಹಣಿಗಿಕೋಲು.

ಬಿಗ್ಗೋಲು : ಹಣಿಗೆಯ ( ಹಚ್ಚು) ಮೇಲ್ಬಾಗ ಮತ್ತು ಕೆಳಭಾಗದಲ್ಲಿ ಕಟ್ಟಿರುವ ಮರದ ಕೋಲು. ಹಣಿಗಿಕೋಲು ನೂಲುಗಳನ್ನು ಪೋಣಿಸುವ ಕೋಲು

ಬಿಗ್ಗೋಲು : ಉದಾತ್ರವನ್ನು ಬಿಗಿ ಮಾಡಲು ಬಳಸುವ ಮರದ ಕೋಲು ಬೆದಕೋಲು ಅಣಿಯನ್ನು ಎತ್ತಲು

ಬೇಲೇತ್ತೋಕೋಲು : ಸೀರೆಯಲ್ಲಿ ನಡುವಿನ ವಿನ್ಯಾಸವನ್ನು ಪಡೆಯಲು ಪಿಂಜರ ಇಲ್ಲದ ಸಂದರ್ಭದಲ್ಲಿ ಅಣಿ ಎತ್ತಿಕೊಳ್ಳಲು ಬಳಸುತ್ತಿದ್ದ ಮರದಸಾಧನ

ಮುಳಿಕೋಲು : ಸೀರೆಯನ್ನು ಮಡಿಸಲು ಬಳಸುವ ಮಾಳದ ಅಳತೆಯ ಕೋಲು. ಎಳೆಗಳ ಮಧ್ಯ ಸೇರಿಸುವ ಮರದ ಕೋಲು, ಎಳೆಗಳನ್ನು ಮೇಲೆ ಕೆಳಗೆ ಒಡೆಯುವ ಕೋಲು

ವಡಿಕೋಲು : ಎಲೆಗಳ ಮಧ್ಯ ಸೇರಿಸಿರುವ ಮರದಕೋಲು. ಎಳೆಗಳನ್ನು ಮೇಲೆ ಕೆಳಗೆ ಒಯ್ಯುವುದು.

ರಾಟ : ನೂಲನ್ನು ಹೈಟಿಗೆ ಸುತ್ತಲು ಬಳಸುವ ಬಿದರಿನ ರಾಟಿ.

**ಲಡಿ** : ನೂಲಿನ ಎಳೆಗಳನ್ನು ಸುತ್ತಿದ್ದ ಭಾಗ.

**ಶಾವಿಕೋಲು** : ಅಂಚಿನ ಭಾಗದಲ್ಲಿ ತೂಕಕ್ಕೋಸ್ಕರ ಬಿಟ್ಟಿರುವ ಬಿದಿರಿನ ಕೋಲು.

**ಸಾಕ್ಕಿಕೋಲು** : ಸಾಕಳಿ ಪಟ್ಟಿ ಮೇಲೆತ್ತುವ ವಿನ್ಯಾಸರೂಪಿಸಲು ಜೋಡಿಸಿರುವ ಎಳೆಗಲನ್ನು ಕಟ್ಟಿರುವ ಪಟ್ಟಿ.

**ಹಣಗಿಕೋಲು** : ಹಣಗಿಯ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಕಟ್ಟಿರುವ ಮರದಕೋಲು ಹಣಗಿಕೋಲು.

**ಹಗ್ಗ** : ಮರದಲ್ಲಿ ಗೂಬೆಗಳಿಗೆ ಕಟ್ಟಲು ಬಳಸುವ ತಂಗಿನ ನಾರಿನಿಂದ ಮಾಡಿರುವ ಹಗ್ಗ.

**ಹರ್ಟಮೂಗು** : ಹರಟೆಯ ಮುಂಭಾಗದಲ್ಲಿ ಎಲೆಗಳನ್ನು ಸೇರಿಸುವ ಭಾಗ.

**ಹರಿ** : ಹಾಸನ್ನು ಸಿದ್ದಮಾಡಿಕೊಳ್ಳಲು ಟಾಣಹರಿ.

## ಅನುಬಂಧ : ೩

# ವಕ್ತೃ ಸೂಚಿ

| ಕ್ರಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ಶಿವರಾಮಪ್ಪ ಸಪ್ಪರದ | ೭೦ | ಇಳಕಲ್ಲ ಸೀರೆ ವ್ಯಾಪಾರಸ್ಥರು ಶ್ರೀಗಜಾನನಟೆಕ್ಸ್‌ಟೈಲ್ಸ್ | ಇಳಕಲ್ಲ. |
| ೨. | ಬಿ.ಕೆ. ಗೂಳೇದ | ೫೦, | ನೇಕಾರಿಕೆ, | ಇಳಕಲ್ಲ |
| ೩. | ಕಾಶಣ್ಣ ಬೆಲ್ಲಾಳ, | ೬೦, | ನೇಕಾರಿಕೆ, | ಇಳಕಲ್ಲ |
| ೪. | ಸತೀಶ ಸಪ್ಪರದ | ೩೦ | ನೇಕಾರಿಕೆ,ವ್ಯಾಪಾರ | ಇಳಕಲ್ಲ |
| ೫. | ಶ್ರೀಮತಿ ಸವಿತಾ ಸಪ್ಪರದ | ೨೫ | ನೇಕಾರಿಕೆ | ಇಳಕಲ್ಲ |
| ೬. | ಗಂಗಪ್ಪ ನಾಳವಾಡ | ೬೫ | ಸೀರೆ ವ್ಯಾಪಾರಸ್ಥರು, | ಇಳಕಲ್ಲ |
| ೭. | ಎಚ್.ಪಿ. ಮಾರ | ೪೫ | ಸೀರೆ ವ್ಯಾಪಾರಸ್ಥರು | ಇಳಕಲ್ಲ |
| ೮. | ನಬಿಸಾಬ ಮುದಗಲ್ | ೪೫ | ಕೈಮಗ್ಗ ನೇಕಾರಿಕೆ | ಇಳಕಲ್ಲ |
| ೯. | ಲಾಡ್ಮ | ೭೫ | ಕಂಡಕಿ ಸುತ್ತುವುದು | ಇಳಕಲ್ಲ |
| ೧೦. | ಮೌಲಾಬಿ | ೩೫ | ಹಣಿಗಿ ತಯಾರಿಕೆ, | ಇಳಕಲ್ಲ |
| ೧೧. | ವಿಠಲ್ | ೪೦ | ಕಂಡಿಕೆ ಸುತ್ತುವುದು | ಇಳಕಲ್ಲ |
| ೧೨. | ಮಹಾಂತೇಶ | ೨೫ | ಬಣ್ಣ ಅದ್ದುವುದು | ಇಳಕಲ್ಲ |
| ೧೩. | ಮಂಜುನಾಥ | ೨೫ | ಬಣ್ಣ ಅದ್ದುವುದು | ಇಳಕಲ್ಲ |
| ೧೪. | ಭೋಜರಾಜ ಸಾ. ರಾಜೋಳ್ಳಿ | ೫೦ | ಲಡಿ ವ್ಯಾಪಾರಸ್ಥರು | ಇಳಕಲ್ಲ |
| ೧೫. | ಗಂಗಾಧರ ಸಾ. ರಾಜೋಳ್ಳಿ | ೫೦ | ರೇಷ್ಮೇಲಡಿ ವ್ಯಾಪಾರಸ್ಥರು, | ಇಳಕಲ್ಲ |
| ೧೬. | ಏಕನಾಥ | ೪೫ | ನೂಲಿನ ವ್ಯಾಪಾರಸ್ಥರು, | ಇಳಕಲ್ಲ |
| ೧೭. | ಸೀತಾರಾಮ ಪಂಪಣ್ಣ ಸರೋದೆ | ೫೫ | ಸೀರೆ ವ್ಯಾಪಾರಸ್ಥರು | ಇಳಕಲ್ಲ |
| ೧೮. | ಮುಕುಂದಪ್ಪ ಗೋಟೂರು | ೫೮ | ಸೀರೆ ವ್ಯಾಪಾರಸ್ಥರು | ಇಳಕಲ್ಲ |
| ೧೯. | ಶ್ರೀ ಕಂದಗಲ್ಲ ರಾಚಪ್ಪ | ೫೮ | ನೇಕಾರಿಕೆ | ಬಾದಾಮಿ |
| ೨೦. | ಶ್ರೀ ಕಂದಗಲ್ಲ ರಾಚಪ್ಪ | ೫೮ | ನೇಕಾರಿಕೆ | ಗಂಗಾವತಿ |
| ೨೧. | ಪರಂಗಿ ನಾಗರಾಜ | ೪೫ | ವ್ಯಾಪಾರ | ಗಂಗಾವತಿ |
| ೨೨. | ಶ್ರೀ ಪಂಪಣ್ಣ ವೀರೇಶ | ೩೫ | ನೇಕಾರ ಸಂಘದ ಅಧ್ಯಕ್ಷರು | ಗಂಗಾವತಿ |
| ೨೩. | ಈರಣ್ಣ ಬೆಗಟೇರಿ | ೫೨ | ನೇಕಾರಿಕೆ | ಗಂಗಾವತಿ |
| ೨೪. | ಶ್ರೀ ಪೆನ್ನಾಲಾಲ್‌ಸೇಟ್ | ೫೦ | ಸೀರೆ ವ್ಯಾಪಾರಸ್ಥರು | ಇಸ್ಲಾಂಪುರ ಗಂಗಾವತಿ ತಾ. |

## ಅನುಬಂಧ : ೪

## ಆಕರ ಗ್ರಂಥಗಳು

೧. ಅಗ್ನಿದಿವ್ಯ, ರವೀಂದ್ರನಾಥ.ಕೆ, ಅಮರ ಪ್ರಕಾಶನ ಗುಲಬರ್ಗಾ, ೨೦೦೩
೨. ಇಳಕಲ್ಲ ಸೀರೆ ಮಂಟಪ ಮಾಲೆ. ಮಹೇಶ್ ತಿಪ್ಪಶೆಟ್ಟಿ ಕನ್ನಡ ವಿ.ವಿ.ಹಂಪಿ ೨೦೦೦
೩. ಇಳಕಲ್ಲ ಸೀರೆಯ ಬಣ್ಣ ಹಾಗೂ ವಿನ್ಯಾಸ, ಕಂದಗಲ್ ಪಿ.ಎಸ್. ಕನ್ನಡ ವಿ.ವಿ. ಹಂಪಿ (ಅಪ್ರಕಟಿತ) ೨೦೦೩
೪. ಉತ್ತರ ಕನ್ನಡ ಜಿಲ್ಲೆಯ ನಾಡವರ ಸಂಸ್ಕೃತಿ ನಾಯಕ ಎಸ್.ಆರ್‌ಜನಪದ ಪ್ರಕಾಶನ ಹೊನ್ನಾವರ ೨೦೦೧
೫. ಕರ್ನಾಟಕ ಜಾನಪದ ಚಿತ್ರಕಲೆ, ಡಾ. ಎಸ್.ಸಿ.ಪಾಟೀಲ, ವೀರಶೈವ ಅಧ್ಯಯನ ಸಂಸ್ಥೆ. ಗದಗ ೧೯೯೩
೬. ಕರ್ನಾಟಕ ಜಾನಪದ ವಿಶ್ವಕೋಶ ೧ ಮತ್ತು ೨ ಡಾ.ಚಂದ್ರಶೇಖರ ಕಂಬಾರ ಕ.ಸಾ.ಪ.ಬೆಂಗಳೂರು ೧೯೮೫
೭. ಕರ್ನಾಟಕದ ಜನಪದ ಕಲೆಗಳು, ಚನ್ನಬಸಪ್ಪ ಗೊ.ರು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೭೭
೮. ಕರಕುಶಲ ಕಲೆಗಳು ಕನ್ನಡ ವಿಶ್ವಕೋಶ-೨, (ಸಂ) ಡಾ. ಕರಿಗೌಡ ಬೀಚನಹಳ್ಳಿ ಕನ್ನಡ ವಿ.ವಿ. ಹಂಪಿ, ೨೦೦೦
೯. ಗ್ರಾಮೀಣ ಉಡುಗೆ ತೊಡಿಗೆಗಳು, ದೇವೇಂದ್ರಕುಮಾರ ಹಕಾರಿ, ಸಂದ್ಯಾರೆಡ್ಡಿ ಕೆ.ಆರ್.ಕ.ಪು.ಪ್ರಾಧಿಕಾರ ಬೆಂಗಳೂರು, ೨೦೦೦
೧೦. ಜಾನಪದ ಜಗತ್ತು, ನಾಗೇಗೌಡ ಎಚ್.ಎಲ್. ಕರ್ನಾಟಕ ಜಾನಪದ ಪರಿಷತ್‌ಬೆಂಗಳೂರು,೧೯೮೮-೯೨
೧೧. ಜನಸಮುದಾಯ ಸಂಪುಟ, ಪ್ರಶಾಂತ ಎಚ್.ಡಿ. ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ,೨೦೦೦
೧೨. ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಮೋಹನ್ ಕೃಷ್ಣ ರೈ, ಕನ್ನಡ ವಿ.ವಿ. ಹಂಪಿ, ೧೯೯೯
೧೩. ದಕ್ಷಿಣ ಕನ್ನಡ ಹಾಗೂ ಕಾಸರಗೂಡಿನ ಶಾಲಿಯ ದೇವಾಂಗ ಸಮುದಾಯದ ಅಧ್ಯಯನ ಡಾ. ಕೆ. ಮೀನಾಕ್ಷಿ (ಅಪ್ರಕಟಿತ) ೨೦೦೩
೧೪. ದೊಂಬಿದಾಸರು, ಪರಮಶಿವಯ್ಯ ಜಿ.ಶಂ. ಬುಕ್‌ಹೌಸ್‌ಪಬ್ಲಿಕೇಶನ್ ಬೆಂಗಳೂರು, ೧೯೮೦
೧೫. ನೇಕಾರಿಕೆ ಮತ್ತು ಸರಕಾರ ಉಪನ್ಯಾಸ ಗ್ರಂಥಮಾಲೆ, ಈರಣ್ಣ ಹಟ್ಟಿ, ಕರ್ನಾಟಕ ವಿ.ವಿ. ಧಾರವಾಡ ೧೯೮೨
೧೬. ಭಾರತ ಗೆಜೆಟ್ಟಿಯರ್‌ಪರಿಷ್ಕೃತ ಆವೃತ್ತಿ, ಕರ್ನಾಟಕ ಸರಕಾರ ಬೆಂಗಳೂರು, ೧೯೯೯
೧೭. ಬಿಜಾಪುರ ಜಿಲ್ಲೆಯ ಜಾತ್ರೆಗಳು, ಚಪ್ಪರಬಂದ್ ಯಾಸ್ಮೀನ್ ಪ್ರಕಾಶನ ಬಿಜಾಪುರ, ೨೦೦೬
೧೮. ಬುಡ್ಗ ಜೆಂಗಾಲು ಸಂಸ್ಕೃತಿ, ಅಂಜಿನಪ್ಪ ಎಳನಾಡು. ಕರ್ನಾಟಕಸಾಹಿತ್ಯಕಾಡೆಮಿ ಬೆಂಗಳೂರು, ೧೯೯೩
೧೯. ಮಾರ್ಗ ಸಂ-೧, ಡಾ. ಎಂ.ಎಂ. ಕಲಬುರ್ಗಿ, ಸ್ವಪ್ನ ಎಜೆನ್ಸಿಸ್,ಬೆಂಗಳೂರು, ೧೯೯೮

೨೦ ಶರಣ ಚರಿತಾಮೃತ: ಸಿದ್ದಯ್ಯ ಪುರಾಣಿಕ, ಪ್ರಿಂಟಿಂಗ್ ಆಂಡ್ ಪಬ್ಲಿಸಿಂಗ್ ಹೌಸ್ ಮೈಸೂರು ೧೯೯೨
೨೧. ಶಂಕರ ದಾಸಿಮಯ್ಯ ಪುರಾಣ ಒಂದು ಅಧ್ಯಯನ, ಅನ್ನಪೂರ್ಣಜಾಲವಾದಿ.ಎಂ ವೀರಶೈವಅಧ್ಯಯನ ಸಂಸ್ಥೆ ಗದಗ ೧೯೯೯
೨೨. ಶ್ರೀದೇವಲ ಮಹರ್ಷಿ, ಪಾಪಣ್ಣ ಈಶ್ವರ ಹುಂಡಿ, ಶ್ರೀ ದೇವಲ ಪ್ರಕಾಶನ ಬೆಂಗಳೂರು, ೧೯೯೯
೨೩. ಶ್ರೀ ದೇವಾಂಗ ಚರಿತೆ, ಶ್ರೀಶೈಲ ಕಳಸದ ಮತ್ತು ವನಹಳ್ಳಿ, ವಿವೇಕ ಪ್ರಕಾಶನ ಗದಗ, ೧೯೨೯
೨೪. ಸೋಲಿಗರ ಸಂಸ್ಕೃತಿ, ಚಂದ್ರು ಕಾಳೇನಹಳ್ಳಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೨೫. ಹಸ್ತಪ್ರತಿ ಸೂಚಿ –೧ ಸಂ. ಹಳ್ಳಿಕೇರಿ ಎಫ್.ಟಿ. ಡಾ.ರವಿಂದ್ರನಾಥ ಕೆ, ಕನ್ನಡ ವಿ.ವಿ. ಹಂಪಿ, ೨೦೦೦

## ಲೇಖನಗಳು : ೨

ಕುಂಟುತ್ತಿರುವ ಕೈಮಗ್ಗ ಉದ್ದಿಮೆ, ಈರಣ್ಣ ಹಟ್ಟಿ
ನೌ ಹರ್ಬಲ್ ಕ್ಲಾಥ್ಸ ಗೋಪಾಲಕುಮಾರ. ಆರ್.
ಪ್ಲಾಸ್ಟಿಕ್ ಮತ್ತು ಬಣ್ಣಗಳು ನಾರಾಯಣ ಮಹಿಷಿ
ಯಂತ್ರಕ್ಕೆ ಒತ್ತು ಕೈಮಗ್ಗಕ್ಕೆ ಕುತ್ತು
ಹೇಮತುಂಗ, ಗಾಯತ್ರಿಪೀಠ ಮಹಾ ಸಂಸ್ಥೆ ೧೯೯೯

## ಪತ್ರಿಕೆಗಳು : ೩

ದೇವಾಂಗ ಸುರಭಿ ಮಾಸ ಪತ್ರಿಕೆ
ಡಕ್ಕಾನ್ ಹೆರಾಲ್ಡ್ ದಿನಪತ್ರಿಕೆ ೨೦೦೨
ವಿಜಯಕರ್ನಾಟಕ ವಿಶೇಷ ಪುರಾವಣಿ ೨೦೦೩
ಸಂಯುಕ್ತ ಕರ್ನಾಟಕ ವಿಶೇಷ ಪುರಾವಣಿ ೨೦೦೨

